॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಶಿಲ್ಪಗ್ರಂಥಮಾಲಾ

ಸಂಖ್ಯೆ—೩

# ಶ್ರೀಮತ್ಸ್ಯಾಮೂರಭಾಷ್ಯೋಪೇತಾ

# ಶ್ರೀಮಚ್ಛಿಲ್ಪವಿದ್ಯಾರಹಸ್ಯೋಪನಿಷತ್

**(ಕರ್ನಾಟಕಭಾಷಾನುವಾದ ವಿವರಣೆ ಸಹಿತವಾಗಿ)**



ಅನುವಾದಕರು

ಶ್ರೀಮಜ್ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯಪೀಠಾಧೀಶ್ವರ

**ಶಿಲ್ಪಸಿದ್ಧಾಂತಿ ಶಿವಯೋಗಿ**

ಶ್ರೀ ಸಿದ್ಧಲಿಂಗಸ್ವಾಮಿಗಳವರು



ಮೈಸೂರು

ಶ್ರೀ ಶ

1948

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಶಿಲ್ಪಗ್ರಂಥಮಾಲಾ

ಸಂಖ್ಯೆ—೩

# ಶ್ರೀಮತ್ಕೌಮಾರಭಾಷ್ಯೋಪೇತಾ

# ಶ್ರೀಮಚ್ಛಿಲ್ಪವಿದ್ಯಾರಹಸ್ಯೋಪನಿಷತ್

## (ಕರ್ನಾಟಕಭಾಷಾನುವಾದ ವಿವರಣೆ ಸಹಿತವಾಗಿ)



ಅನುವಾದಕರು

ಶ್ರೀಪುಷ್ಪಗಿರ್ಯಗ್ರದ ನಾಗಲಿಂಗಪರಿವ್ರಾಜಕಾಚಾರ್ಯಪೀಠಾಧೀಶ್ವರ

ಶಿಲ್ಪಸಿದ್ಧಾಂತಿ ಶಿವಯೋಗಿ

ಶ್ರೀ ಸಿದ್ಧಲಿಂಗಸ್ವಾಮಿಗಳವರು



ಮೈಸೂರು

ಶ್ರೀ ಪರಿಮಳ ಪವರ್ ಪ್ರೆಸ್

1948

# ಪೀಠಿಕಾ

---

ಭೂಲೋಕದಲ್ಲಿ ಶಿಲ್ಪೋತ್ಪತ್ತಿಯ ಕಾಲಮಾನದ ವಿಚಾರದಲ್ಲಿ ಅನೇಕ ಪಂಡಿತರು ಚಾರಿತ್ರಿಕದೃಷ್ಟಿಯಿಂದ ನಾನಾವಿಧವಾಗಿ ಕಾಲನಿರ್ಣಯ ಮಾಡಿರುತ್ತಾರೆ. ಶಾಸ್ತ್ರದೃಷ್ಟಿಯಿಂದ ನೋಡುವುದಾದರೆ ಸಕಲ ಶಾಸ್ತ್ರಗಳಿಗೂ ವೇದವು ಮೂಲವಾಗಿದೆ. ವೇದದಲ್ಲಿ ಶಿಲ್ಪವು ಪ್ರಸಿದ್ಧವಾಗಿರುವದರಿಂದ ವೇದದ ಕಾಲವೇ ಶಿಲ್ಪದ ಕಾಲವೆಂದೂ ನಿರ್ಧರಿಸಬಹುದು. ಅಲ್ಲದೆ ವಿಶ್ವ ಸೃಷ್ಟಿಯೇ ಶಿಲ್ಪಕರ್ಮವಾಗಿರುವುದರಿಂದ ಸೃಷ್ಟಿಕಾಲದಿಂದಲೂ ಶಿಲ್ಪವು ಸರ್ವತೋಮುಖವಾಗಿ ಪ್ರಕಾಶಿಸುತ್ತ ಮಾನವನ ಲೌಕಿಕ ಪಾರಮಾರ್ಥಿಕ ಸಾಧನೆಗೆ ಅಧಿಷ್ಠಾನವಾಗಿರುತ್ತದೆ. ವೇದದಲ್ಲಿ ಮಂತ್ರಬ್ರಾಹ್ಮಣಗಳು ಕರ್ಮಕಾಂಡವಾಗಿಯೂ ಉಪನಿಷತ್ತುಗಳು ಜ್ಞಾನಕಾಂಡವಾಗಿಯೂ ಇರುವಂತೆ ಶಿಲ್ಪದಲ್ಲಿಯೂ ಕರ್ಮ ಮತ್ತು ಜ್ಞಾನಭಾಗಗಳು ಇರುತ್ತವೆ. ಆದರಿಂದ ಶಿಲ್ಪಶಾಸ್ತ್ರಕ್ಕೆ ಶಿಲ್ಪವೇದವೆಂದೂ ಉಪವೇದವೆಂದೂ, "ಚರಣ್ಯವ್ಯೂಹದಲ್ಲಿ "ಸ್ಥಾಪತ್ಯವೇದೋ ವಿಶ್ವಕರ್ಮಾದಿಶಿಲ್ಪಶಾಸ್ತ್ರಮಥರ್ವವೇದಸ್ಯೋಪವೇದಃ ||
ಎಂದೂ, ಭಾಗವತದಲ್ಲಿ "ವಿಜ್ಞಾನಂ ಶಿಲ್ಪನೈಪುಣಂ" ಎಂದೂ ಪ್ರಮಾಣವಿರುವುದರಿಂದ ಶಿಲ್ಪವು ವೇದವೆಂದೇ ಪ್ರಸಿದ್ಧವಾಗಿದೆ ಮತ್ತು ಶಿಲ್ಪವೇದದಿಂದ ಅತ್ಯಂತ ಸುಲಭವಾಗಿ ಆಧ್ಯಾತ್ಮಜ್ಞಾನವು ಪ್ರಾಪ್ತವಾಗುತ್ತದೆಂದು ಶಿಲ್ಪವಿದ್ಯಾರಹಸ್ಯೋಪನಿಷತ್ತಿನಲ್ಲಿ ಸುಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಪ್ರಕಾರ ಪ್ರಪಂಚದ ಕರ್ಮ ಮತ್ತು ಜ್ಞಾನಮಾರ್ಗಗಳ ಪ್ರಗತಿಗೆ ಮೂಲಭೂತವಾಗಿರುವ ಶಿಲ್ಪವಿದ್ಯೆಯು ಬಹು ಕಾಲ

ದಿಂದಲೂ ಎಣ್ಣೆ ಬತ್ತಿಗಳಿಲ್ಲದ ದೀಪದಂತೆ ಪ್ರಕಾಶಹೀನವಾಗುತ್ತಿರುವುದು ಬಹು ವಿಷಾದಕರವು. ಭೂಲೋಕದಲ್ಲಿರುವ ಪ್ರತಿಯೊಂದು ವಸ್ತುನಿರ್ಮಾಣವೂ ಶಿಲ್ಪಶಾಸ್ತ್ರವಿಧಿಯಿಂದಲೇ ಆಗಿ ಮನುಷ್ಯಕೋಟಿಯ ನಿತ್ಯಕರ್ಮದ ಉಪಯೋಗಕ್ಕೆ ಬಂದಲ್ಲದೆ ದೇಶದ ಸಂಪತ್ತು ಎಂದಿಗೂ ವೃದ್ಧಿಯಾಗಲಾರದು. ವಿಶ್ವದ ಸಂಪದಭಿವೃದ್ಧಿಯಾಗಬೇಕಾದರೆ ಶಿಲ್ಪವಸ್ತು ನಿರ್ಮಾಣವನ್ನೂ ಶಿಲ್ಪಶಾಸ್ತ್ರವನ್ನೂ ವೃದ್ಧಿಪಡಿಸಿ ಆಚರಣೆಗೆತರಬೇಕು. ಇಲ್ಲವಾದರೆ ಯಾವ ದೇಶವಾದರೂ ವೃದ್ಧಿಯನ್ನು ಹೊಂದಲಾರದು. ದೇಶದ ಯಾವುದೇ ಸಂಸ್ಕೃತಿ ನಾಗರೀಕತೆಗಳಾಗಲಿ ಅವೆಲ್ಲವೂ ಶಿಲ್ಪದಿಂದಲೇ ಬೆಳೆಯುಬೇಕು. ಪ್ರಾಚೀನಕಾಲದ ಗೃಹ ಸೌಧ ದೇವಾಲಯ ರಥಯಂತ್ರಗಳೂ ವಾಪೀಕೂಪತಟಾಕಾದಿಗಳೂ ಶಸ್ತ್ರಾಸ್ತ್ರಗಳೂ ಸುವರ್ಣಾಲಂಕಾರಲೋಹಪಾತ್ರಾದಿಗಳೂ ಶಿಲ್ಪದಿಂದಲೇ ಆಗಿ ಇಂದಿಗೂ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಪ್ರಾಚೀನದ ನಾಗರಿಕ ಸಾಂಸ್ಕೃತಿಕವೈಭವವನ್ನು ಎತ್ತಿ ತೋರಿಸುತ್ತಾ ಪ್ರತಿಯೊಬ್ಬನ ಮನಸ್ಸನ್ನು ಆಕರ್ಷಿಸುತ್ತದೆ. ಇಂತಹ ಸರ್ವೋತ್ಕೃಷ್ಟವಾದ ಸತ್ಕರ್ಮಸುಜ್ಞಾನಗಳ ಸಂಪತ್ತನ್ನು ಉದ್ಧರಿಸುವದು ಪ್ರತಿಯೊಬ್ಬ ಮಾನವನ ಕರ್ತವ್ಯ ಕರ್ಮವೆಂದುತಿಳಿದು ಸುಮಾರು ಅರ್ಧಶತಮಾನದಿಂದಲೂ ಶಿಲ್ಪೋದ್ಧಾರಕ್ಕಾಗಿ ಶ್ರಮಿಸುತ್ತ ಅನೇಕ ಪ್ರಾಚೀನಗ್ರಂಥಶೋಧನೆ ಮಾಡುತ್ತಿರುವಲ್ಲಿ ಶಿಲ್ಪಕರ್ಮಶಿಲ್ಪಜ್ಞಾನಗಳನ್ನು ಬೋಧಿಸುವ ಶಿಲ್ಪವಿದ್ಯಾರಹಸ್ಯೋಪನಿಷತ್ತು ಮತ್ತು ಅದರ ಭಾಷ್ಯವೂ ದೊರಕಿತು. ಆದರೆ ಇದರ ಲೋಪಗಳನ್ನು ಸರಿಪಡಿಸಲು ಮತ್ತೊಂದು ಗ್ರಂಥವು ದೊರಕದೆ ಪ್ರಕಾಶಗೊಳಿಸಲು ಯೋಚಿಸುತ್ತಿರುವಲ್ಲಿ ಆಂಧ್ರದೇಶದ ಬ್ರ॥ ಶ್ರೀ ನಿರಂಜನ ಶಾಸ್ತ್ರಿಗಳು ತಮ್ಮ ಗ್ರಂಥದಲ್ಲಿ "ಮಹಾಶಿಲ್ಪೋಪನಿಷತ್" ನ್ನು ಪ್ರಕಟ

ಮಾಡಿದರು. ಆದರೆ ನಮಗೆ ಉಪಲಬ್ಧವಾಗಿರುವ ಉಪನಿಷತ್ತಿನ ನಾಮವು "ಶಿಲ್ಪವಿದ್ಯಾರಹಸ್ಯೋಪನಿಷತ್" ಎಂದಿರುತ್ತದೆ. ಈ ಎರಡೂ ವಿಶೇಷ ವ್ಯತ್ಯಾಸವೇನೂ ಇಲ್ಲದೆ ಏಕ ಕಂಠವಾಗಿಯೇ ಇದೆ. ನಮಗೆ ದೊರೆತಿರುವ ಭಾಷ್ಯಕ್ಕೆ ಕೌಮಾರ ಭಾಷ್ಯವೆಂಬ ಅಭಿಧಾನವಿದೆ. ಈ ಭಾಷ್ಯಕರ್ತರು ಯಾರೆಂಬುದು ದೊರೆತಿಲ್ಲ. ಆದರೆ ಪ್ರಾಚೀನಶಿಲ್ಪ ಗ್ರಂಥಗಳಲ್ಲಿ ಕುಮಾರವಾಸ್ತು ಎಂದೂ ಶಿಲ್ಪರತ್ನ ಗ್ರಂಥಕರ್ತರ ನಾಮವು ಕುಮಾರ ಎಂದೂ ಇರುವುದರಿಂದ ಇವರುಗಳಲ್ಲಿ ಯಾರಾದ ರೊಬ್ಬರು ಈ ಕೌಮಾರ ಭಾಷ್ಯವನ್ನು ರಚಿಸಿರಬಹುದೆಂದು ಊಹಿಸ ಲಾಗಿದೆ. ಭಾಷ್ಯವು ಬಹುಗಂಭೀರವಾಗಿಯೂ ಪ್ರಾಚೀನಶೈಲಿಯಲ್ಲಿಯೂ ಉಪನಿಷದ್ವ್ಯಾಖ್ಯಾನುಸಾರವಾದ ಪದಗಳಿಗೆ ಅವಿರುದ್ಧವಾಗಿ ತಾತ್ಪರ್ಯ ಲಿಂಗಷಟ್ಕದಿಂದ ಅರ್ಥವನ್ನು ವಿವರಿಸಲು ಸ್ವಪದವರ್ಣನೆಯುಂದಿರು ವುದೇ ಭಾಷ್ಯವು ಎಂಬ ಸಾಂಪ್ರದಾಯಕ್ಕನುಸಾರವಾಗಿಯೂ ಇರುತ್ತದೆ ಈ ಪ್ರಕಾರ ಭಾಷ್ಯಸಹಿತವಾದ ಶಿಲ್ಪವಿದ್ಯಾರಹಸ್ಯೋಪನಿಷತ್ತು ಇದು- ವರೆಗೆ ಎಲ್ಲಿಯೂ ಮುದ್ರಣವಾಗಿ ಪ್ರಕಾಶಕ್ಕೆ ಬಂದಿರುವುದಿಲ್ಲ. ಶಿಲ್ಪ ಶಾಸ್ತ್ರಾಧ್ಯಯನನಿಷ್ಠರಾದ ಪಂಡಿತರಿಗೂ ಶಿಲ್ಪವಿದ್ಯಾರ್ಥಿಗಳಿಗೂ ಇತ ರರಿಗೂ ಶಿಲ್ಪವಿಜ್ಞಾನರಹಸ್ಯವು ಸರಳವಾಗಿ ಬೋಧೆಯಾಗಿ ಶಿಲ್ಪದಿಂದ ಸಕಲ ಸಂಪತ್ತುಗಳು ವೃದ್ಧಿಯಾಗಿ ದೇಶೋನ್ನತಿಯಾಗಲೆಂಬ ಸದು ದ್ದೇಶದಿಂದ ಈ ಗ್ರಂಥವನ್ನು ಪ್ರಕಾಶಗೊಳಿಸಿರುತ್ತೇವೆ. ಶಿಲ್ಪವಿಜ್ಞಾ ನವೇ ದೇಶಾಭ್ಯುದಯದ ಮೂಲಧನವೆಂದು ಮನಗಂಡ, ಶಿಲ್ಪಕಲೆಯ ತೌರೂರಾದ ಮೈಸೂರು ಕರ್ನಾಟಕ ದಿವ್ಯರತ್ನಸಿಂಹಾಸನಾಧೀಶರಾದ ಶ್ರೀ ವಿದ್ಯಾಚಿತ್ರಭಾನಂದ ರಾಜಯೋಗೀಂದ್ರ ಶ್ರೀ ಶ್ರೀ ಜಯಚಾಮ ರಾಜೇಂದ್ರಮಹಾಪ್ರಭುವರ್ಯರು ತಮಗಿರುವ ಶಿಲ್ಪಕಲಾಭಿಮಾನ

ದಿಂದ ತಮ್ಮ ಗ್ರಂಥಮಾಲಿಕೆಯಲ್ಲಿ ಈ ಸದ್ಗ್ರಂಥವನ್ನು ಮುದ್ರಣ ಮಾಡಿಸಿ ಶಿಲ್ಪಜಗತ್ತಿಗೆ ಮಹದುಪಕಾರ ನೀಡಿರುತ್ತಾರೆ. ಈ ಮಹೋಪಕಾರದಾತರಾದ ಶ್ರೀಮದಿತ್ಯಾದಿಬಿರುದಾಂಕಿತರಾದ ಮಹಾಪ್ರಭುವರ್ಯರಿಗೂ ಅವರ ಜನನೀ ಪತ್ನೀ ಪುತ್ರೀ ಬಂಧು ಬಾಂಧವಾದಿಗಳಿಗೂ ಸಚಿವೋಪಸಚಿವರಾಪ್ತರಿಗಳಿಗೂ ವಿಶ್ವನಿರ್ಮಾತೃಜಗಚ್ಛಿಲ್ಪಿಯಾದ ಪರಶಿವನು ಆಯುರಾರೋಗ್ಯಪುತ್ರಪೌತ್ರಾದಿಸಂಪದಗಳನ್ನೂ ಸಮಸ್ತ ಲೌಕಿಕಾಧ್ಯಾತ್ಮಿಕಜ್ಞಾನವಿಜ್ಞಾನಗಳನ್ನೂ ಅನುಗ್ರಹಿಸಲೆಂದು ಆಶಿಸುತ್ತೇವೆ.

ಮೈಸೂರು,<br>ಸರ್ವಧಾರಿ ಸಂ॥ ಮಾರ್ಗಶೀರ್ಷ ಶು॥ ೮<br>9-12-1948

ಇತ್ಥಂ ಸಂಗ್ರಹೀತಾರಃ

॥ ಶ್ರೀ ॥

# ಅಥ ಶಿಲ್ಪವಿದ್ಯಾರಹಸ್ಯೋಪನಿಷತ್ಪ್ರಾರಂಭಃ



ಓಂ ಸಹ ನಾವವತು । ಸಹ ನೌ ಭುನಕ್ತು ।
ಸಹ ವೀರ್ಯಂ ಕರವಾವಹೈ। ತೇಜಸ್ವಿನಾವಧೀ-
ತಮಸ್ತು ಮಾ ವಿದ್ವಿಷಾವಹೈ । ಓಂ ಶಾನ್ತಿಃ
ಶಾನ್ತಿಃ ಶಾನ್ತಿಃ ॥

ಅಥ ಶಿಲ್ಪವಿದ್ಯಾರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮಃ । ಸಕಲನಿಗಮಾಗಮಸಾರಪಾರಗಂ ಪರಿಪಕ್ವಭಾವಭರಮಾಚಾರ್ಯಂ ಪ್ರಣಮ್ಯ ಛಾತ್ರಃ ಪರಿಪೃಚ್ಛತಿ। ಭಗವನ್ ಮೇ ಮಹಾಶಿಲ್ಪತತ್ತ್ವ-ರಹಸ್ಯಂ ಬ್ರೂಹೀತಿ । ತಗ್ಂ ಸಹೋವಾಚ । ಅಣೋರಣೀಯೋ ಮಹತೋ ಮಹೀಯೋಽತೋ ನ ವೇದಿತುಗ್ಂ ಶಿಲ್ಪರಹಸ್ಯಗ್ಂ ಶಕ್ನೋತಿ । ಭವ ತಸ್ಮಾತ್ಸಾವಧಾನಃ । ವಾಙ್ಮನೋಗೋಚರಾ-ತೀತಾನನ್ತದಿವ್ಯತೇಜೋಮಯೋ ನಿತ್ಯೋ ನಿರ್ವಿಕಲ್ಪೋ ನಿರಂ-ಜನೋ ನಿರಾಖ್ಯಾತೋಽತಿಶುದ್ಧೋ ದೇವ ಏಕಃ ಪರಬ್ರಹ್ಮಾ ವಿರಾಜತೇ । ಸ ಏವಾಖಿಲಾಜಾಂಡಕೋಟೀನಾಂ ಮೂಲಬೀಜಂ ಭವತಿ । ತಸ್ಮಾನ್ನ ದ್ವಿತೀಯೋಽಸ್ತಿ ಕಶ್ಚಿತ್ ಸ ನಿರಾಕಾರೋಽಪಿ ಸಾಕಾರತ್ವಂ ವಿಧತ್ತೇ । ನಿರಾಕಾರಸಾಕಾರಾವಸ್ಯ ನೈಸರ್ಗಿಕೌ ವರ್ತೇತೇ । ಜಗದುದಯಕಾರಣಂ ತನ್ಮನೋ ಜಾಯತೇ ।

ಮನಸ್ಸಂಕಲ್ಪಾತ್ಸರ್ವಂ ಜಗತ್ಸಂಕಲ್ಪಿತಂ ಭವತಿ । ತದೇವೈವಂ ಪ್ರಾರಭ್ಯತೇ ಜಗಚ್ಛಿಲ್ಪಂ । ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನಿಷಸಾದ ಪಿತಾ ನಃ । ಸ ಆಶಿಷಾ ದ್ರವಿಣ-ಮಿಚ್ಛಮಾನಃ ಪರಮಚ್ಛದೋ ವರ ಆ ವಿವೇಶ । ವಿಶ್ವಾನಿ ಸೃಷ್ಟ್ಯವನಪ್ರಳಯರೂಪಾಣಿ ಕರ್ಮಾಣಿ ಯಸ್ಯಾಸೌ ವಿಶ್ವಕರ್ಮಾ ಭವತಿ । ಯಸ್ಮಿನ್ನಿದಗ್ಂ ಸರ್ವಂ ಭುವನಂ ಜಜಾನ । ಯಸ್ಮಾ-ದಿದಗ್ಂ ಸಮಸ್ತಗ್ಂ ಸಂಕಲ್ಪರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ ಸ ವಿಶ್ವಕರ್ಮಾ ಪರಮಾತ್ಮಾ ಭವತಿ । ಆದಿಶಿಲ್ಪಕೃತ್ತತಃ ಸ ಭವತಿ । ಮನಸಾ ಯತ್ಸೃಜ್ಯತೇ ವಿಶ್ವಕೃದಸ್ತತ್ಸರ್ವಗ್ಂ ಶಿಲ್ಪಮೇವ ಭವತಿ । ಯತ್ತದ್ವಿಧಾನಮನುಬ್ರೂಹೀತಿ ಛಾತ್ರೇಣ ಪೃಷ್ಟೋ ದೇಶಿಕಸ್ಸ ಪುನರುವಾಚೇತಿ । ಯದಾ ಸ ಪರಬ್ರಹ್ಮಣಸ್ಸಂಕಲ್ಪೋ-ದಯೋ ಭವತಿ ತದೈವಾಹಂಕಾರಃ ಪ್ರಜಾಯತೇ ತಸ್ಮಾತ್ಪಂಚ ಚ ಭೂತಾನಿ । ಭೂತೇಭ್ಯ ಓಷಧಯಸ್ಸರ್ವೇ । ತೇಭ್ಯೋಽನ್ನಂ ತತಃ ಸ್ಥಾವರಜಂಗಮಃ ಪ್ರಪಂಚೋ ಭವತಿ। ಕಾರಣಂ ಭವತ್ಯತ್ರ ಚೋಪಾದಾನಮಾಕಾಶಾದೀನಿ । ಅಖಂಡೋಽಪಿ ದೀವ್ಯತೇಽಯ-ಮೇವ ಹೃತ್ಕೋಶೇಷು ಪರಿಚ್ಛಿನ್ನಜೀವತ್ವೇನ ವ್ಯಾಪ್ನೋತಿ ಚಾಕಾಶವತ್ಸರ್ವಂ । ಅಲಂಚಕಾರ ನಕ್ಷತ್ರಾದಿಭಿರಾಕಾಶಂ । ಶೈಲಕಾನನದ್ರುಮಾದಿಭಿಶ್ಚ ವಸುಂಧರಾಂ । ನಾನಾರ್ಥಭಾಜಂ ವಾಚಗ್ಂ ಶಿಲ್ಪವಿಚಿತ್ರಸುಂದರಾಮಕರೋತ್ । ಏವಮೇವಾ-ಲಂಕೃತಮಾ ಪದಾರ್ಥಾನಿ ವೈ ಸರ್ವಾಣಿ । ಸರ್ವಮೇತದ್ಭವತಿ ವಿಶ್ವಕೃದಃ ಶಿಲ್ಪಂ । ಯದಾ ತದಾಭವಜ್ಜಗದ್ವಿಜ್ಞಾನಶೂನ್ಯಗ್ಂ

ಸೋಽಕಾಮಯತಾತ್ಮಾನಂ ಪಂಚಾಸ್ಯಂ । ತದ್ವೈನಾವಿರಾಸೀ-
ತ್ಪ್ರವೃತ್ತ್ಯೈ । ತಸ್ಯೈವ ತೇಜೋಂಽಶಾದಭರ್ವ ಬ್ರಹ್ಮಣೋ
ಮನುರ್ಮಯಸ್ತ್ವಷ್ಟಾ ಶಿಲ್ಪೀ ವಿಶ್ವಜ್ಞ ಇತಿ ಪಂಚ । ತಾನೇವಗ್ಂ
ಹೋವಾಚ ವಿಶ್ವಕರ್ತಾ। ಪ್ರವರ್ತಯತ ಲೋಕಂ ಪಂಚಕರ್ಮಭಿ-
ರಿತಿ । ಪ್ರವರ್ತತ ಇತ್ಯೇತೈಃ ಪಂಚಭಿರಿತಿ ಪ್ರಪಂಚೋ ಭವತಿ ।
ಯಜ್ಞ ಏವೇದಂ ಕರ್ಮ ಯಜ್ಞೈಃ ಕರ್ಮೈವ । ಶೃಣುತ ತದ್ಯಥಾ
ಸೃಷ್ಟಿಸ್ಥಿತಿಲಯತಿರೋಧಾನಾನುಗ್ರಹರೂಪಾಣೀತಿ । ಏತದ್ಭವ-
ತ್ಯೇವಂ ವಿಶ್ವಕರ್ಮಣಃ ಕುರ್ಯಾದೇವಮೇವ ಚ ಲೋಕಸ್ಯ ।
ದಾತಾರೋ ಭವನ್ತು ಜ್ಞಾನಸ್ಯ ವಿಜ್ಞಾನಸ್ಯ ಚ ಶಿಲ್ಪಿನಃ ।
ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞರೂಪಃ । ವಿಲಸಿತ-
ಮೇವಂ ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲಂ । ಗುಹ್ಯಮಿದಾ-
ವಾಖ್ಯಾತ್ಮಂ । ರಹಸ್ಯಂ ಭವತಿ ಪ್ರಾಣಿನಾಮಜ್ಞೇಯಂ । ತದೇ-
ತದ್ವಿವೃಣುತ ವಿವೃಣುತ ಲೋಕಸ್ಯ । ಪ್ರಕಲ್ಪಯತ ಯಜ್ಞಗ್ಂ
ಶಿಲ್ಪೇನ । ಶಿಲ್ಪೇನೈವೇದಮುಪಬೃಂಹಿತಂ । ಯಜ್ಞೋ ಭವತಿ
ಲೋಕಾನಾಂ ನಿಶ್ರೇಯಸೇ । ಸಿದ್ಧೇರನ್ನಿವಿಧಾನ್ಯಪಿ ಕಾರ್ಯಾಣಿ ।
ಭವತಿ ಚ ತನ್ನಾನಾವಿಧಶಿಲ್ಪಬಹುಳಂ । ಶಿಲ್ಪಾದೃತೇ ಕಿಂಚಿ-
ತ್ಸತ್ರಮಿತಿ ನೋಚ್ಯತೇ ನೋಚ್ಯತ ಇತಿ । ತತೋಽವಶ್ಯಂವಿಸೃಜತ
ವಿಸೃಜತೋಪಕರಣಾನಿ ಜ್ಯೇಷ್ಠಾಃ । ಅಭ್ಯರ್ಚನೀಯೋಽಹಂ
ಯಜ್ಞೇನೈವ ಲೋಕಸ್ಯ । ತಾನ್ಯೇವಂ ವೇದೀಕುಂಡರಥಪಾತ್ರಾ-
ದೀನ್ಯಭ್ಯೂಹಯತ । ಕಾರಯತಾಧ್ವರಾ ಸರ್ವೈರಪಿ ಲೋಕೈ-
ರನುಶ್ರುತಮಿತಿ । ಏಕೈಕಸ್ಯೈಕೈಕೋಽಧ್ಯಕ್ಷ ಇತಿ ವೇದಸ್ಯ

ತತ್ರಾಥರ್ವಣಶ್ಶಿಲ್ಪಭೂಯಿಷ್ಠಮತ್ಯಸ್ತಂ । ಮನ್ತ್ರೇಣೈವ ಸ್ವರೂಪಾಣಿ ಪ್ರಕರ್ತವ್ಯಾನಿ । ಧ್ಯಾನೇನೈವ ಪಶ್ಯನ್ತಿ ತದ್ರೂಪಂ । ರೂಪೇಣೈವ ಧ್ಯಾಯನ್ತೇ ತದ್ದೈವತಂ । ರೂಪಮೇವ ತಚ್ಛಿಲ್ಪಂ । ತಾನ್ಯಯೋದಾರುಶಿಲಾತಾಮ್ರಹಿರಣ್ಯಪಿಕಾರಾಣಿ । ಮೃದಾದೀನ್ಯಥಮಾನಿ । ಯದ್ಯಸ್ಯೋಕ್ತಂ ತದ್ವಿಕಾರಂ ತಸ್ಯ । ಆಯತನವನ್ತಿ ವೈ ಸರ್ವಾಣ್ಯಪಿ ದೈವತಾನಿ । ಏವಮೇವಾಪರಾಣ್ಯಪಿ ಶಿಲ್ಪವಿಲಸಿತಾನಿ ಕರ್ಮಾಣಿ । ಭವನ್ತ್ಯೇತಾನಿ ಚ ಮೋಕ್ಷಪ್ರದಾನಿ । ಸಂಪದ್ಯೇರ್ಞ ಸರ್ವಕಲ್ಯಾಣಾನಿ ಲೋಕಾಃ । ಸಂಚಿನುಯಾತ್ಪುಣ್ಯಮೇಭಿಃ ಶಿಲ್ಪೈರಿತಿ । ಬ್ರಾಹ್ಮಣಾನಾಮೇತದ್ಭವತಿ ಶಿಲ್ಪಂ । ಯದ್ಯಬ್ರಾಹ್ಮಣೋ ಭವೇಸ್ನ ಶಿಲ್ಪೀತಿ । ಅಬ್ರವೀದೇವಂ ಪುನರಾಚಾರ್ಯಃ ಸರ್ವಜ್ಞಃ । ಯದಾ ಯದಾವಹೀಯತೇ ಲೋಕಾದಸ್ಮಾದ್ಧರ್ಮಗ್ಂ ಶಿಲ್ಪರೂಪಂ । ತದೈವಾವಿರ್ಭೂಯತೇ ಭಗವಾನ್ವಿಶ್ವಕರ್ಮಾತ್ಮನಸ್ತೇಜಸಃ ಪ್ರಕಲ್ಪ್ಯಾಕಾರಾಣ । ತಸ್ಮಾದೇವ ಪ್ರಜಾಪತ್ಯೃಷಯಃ ಪ್ರಜಾಯನ್ತೇ ಶಿಲ್ಪವಿಭವಃ । ತೇಭ್ಯ ಏವ ಪಾರಂಪರ್ಯಗ್ಂ ಸಮಾಗತಂ ಭವತಿ ಶೈಲ್ಪಿಕಮಾಚಾರ್ಯತ್ವಂ ಚ । ದೇವಾನಾಮಸ್ಯಾಚಾರ್ಯಾಸ್ತ ಏವ ವಿಭ್ರಾಜನ್ತೇ ಮಹಾನ್ತಃ । ನಿರುಕ್ತಾಸ್ತೇ ಭವನ್ಯಾದಿಕರ್ತಾರೋ ಲೋಕಪ್ರವರ್ತಕಾಃ । ತದ್ದ್ವಿವಿಧಮೇವಗ್ಂ ಶಿಲ್ಪಂ ದೈವಂ ಮಾನುಷಂ ಚೇತಿ । ನಾಭಾನೇದಿಷ್ಠಾದೀನ್ಯತ್ರ ಪ್ರಥಮಾನಿ । ಅನ್ಯಾನಿ ಮಾನುಷಾಣೀತ್ಯುಚ್ಯನ್ತೇ । ದೇವಮೂರ್ತಿಭೇದಾಯತನೇಷ್ವಾದಿಕಂ ಭವತಿ ಸರ್ವಂ ದೈವಮಿತಿ ವಿಚಿತ್ರಗ್ಂ

ಶಿಲ್ಪಂ । ಮಾನುಷಂ ಚೈವಂ ಭವತಿ ಶಸ್ತ್ರಾಸ್ತ್ರಯನ್ತ್ರಹಲ-ಪ್ರಾಸಾದವಾಸ್ತ್ಯಾಭರಣಾದೀನೀತಿ । ತಯೋರೇವಗ್ಂ ಶಿಲ್ಪಯೋ-ರ್ಭವನ್ತಿ ವಾಗೀಶ್ವರೀ ಮೇರ್ವಾದೀನ್ಯುಪಕರಣಾನಿ । ಏಭ್ಯೋ ದಶಭ್ಯ ಏವ ಕ್ರಿಯತೇ ಸರ್ವಂ ವೈ ವಿಚಿತ್ರಗ್ಂ ಶಿಲ್ಪಂ । ಅತಃ ಶಿಲ್ಪಮೂಲಾನಿ ಸರ್ವಾಣಿ । ಪೂಜನೀಯಾನಿ ಸರ್ವೇಷಾಮತೋ ಭವನ್ತಿ ವೈ ಶಿಲ್ಪಾನಿ । ಏಭಿಃ ಸುಖಂ ಜೀವೇಯುರ್ಲೋಕಾಃ । ಏಭಿರಾಪ್ನುಯಾನ್ನಿಶ್ರೇಯಸಂ । ಏಭಿರ್ಭವನ್ತಿ ಜಗನ್ತಿ ಚಕ್ಷುಷ್ಮನ್ತಿ । ಏಭಿಃ ಪೂಜ್ಯನ್ತೇಽತ್ರ ವೇಧಸಃ ಸ್ಥಪತಯಶ್ಚ । ಏಭಿಃ ಪೂರ್ಣಂ ಭವತ್ಯಾನಂದಂ ಚ । ಏಭಿರ್ಮಾನುಕ್ಷವಃ ಪ್ರಾಪ್ನುವನ್ತಿ ಮೋಕ್ಷಂ । ಇತ್ಯೇವಂ ಭವತಿ ಶಿಲ್ಪಂ । ಶಿಲ್ಪಗ್ಂ ಹ್ಯಸ್ಮಿನ್ನಧಿಗಮ್ಯತೇ । ತಸ್ಮಾಜ್ಜಗತ್ಸರ್ಜನಂ ಭವತಿ ಶಿಲ್ಪಂ । ಯಜ್ಞೋ ಭವತು ವಿಜ್ಞಾನಂ ಚ ಶಿಲ್ಪಂ । ಲೌಕಿಕಂ ಭವತು ವೈದಿಕಂ ಚಾಪಿ ಶಿಲ್ಪಂ । ಬ್ರಾಹ್ಮಣಾನಾಮೇವೇದಗ್ಂ ಶಿಲ್ಪಂ ಭವತು । ತತ್ತ್ವಂ ಭವತಿ ಶಿಲ್ಪಂ । ರಹಸ್ಯಂ ಭವತಿ ಶಿಲ್ಪಂ । ಜಗತ್ಸರ್ವಗ್ಂ ಶಿಲ್ಪಮೇವ ಭವತಿ । ತದೇವ ವಿಶ್ವವರ್ಧಕಂ ಭವತೀತ್ಯುಪನಿಷತ್ ॥

ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

॥ ಇತಿ ಯಾಜುಷಾಥರ್ವಣಶಿಲ್ಪವಿದ್ಯಾರಹಸ್ಯೋಪನಿಷತ್ಸಮಾಪ್ತಾ ॥



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶಿಲ್ಪವಿದ್ಯಾರಹಸ್ಯೋಪನಿಷತ್



**ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥**

ಅಥ ಶಿಲ್ಪವಿದ್ಯಾರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮಃ ।

---

## ॥ ಕೌ ಮಾ ರಂ ಭಾ ಷ್ಯ ಮ್ ॥

ಯೋ ಜೀವಾನ್ಕರ್ಮವಶ್ಯಾನ್ ದೃಢತರತಮಸಾ ಮೋಹಿತಾನ್ ಪಾತುಕಾಮೋ ವಿಜ್ಞಾನಂ ದಿತ್ಸುರೇಭ್ಯೋ ಭವತತಿಜನಿತಾನೇಕಕರ್ಮಾನುರೂಪಮ್ । ಸಜ್ಜ್ಞಾನಾನನ್ದರೂಪೋಽಪ್ಯಗಣಿತಮಹಿಮಸ್ವಾತ್ಮಮಾಯಾಂ ಸ್ವಶಕ್ತಿಂ ಸಂಗೃಹ್ಣನ್ ವೇದಶಿಲ್ಪಂ ಪ್ರಕಟಯತಿತರಾಂ ಸಾಮ್ಬಮೂರ್ತಿಸ್ಸ ನೋಽವ್ಯಾತ್ ॥

**ಅಥ ಶಿಲ್ಪಾನುಶಾಸನಂ । ಕಿಮಾಖ್ಯಾನೋಽಯಮರ್ಥೇತಿ ।**

---

## ಕೌಮಾರ ಭಾಷ್ಯಾನುವಾದವು

ಶ್ರೀ ಸಾಂಬಮೂರ್ತಿಯಾದ ಪರಮೇಶ್ವರನು ಅತಿ ಪ್ರಬಲವಾದ ಅಜ್ಞಾನದಿಂದ ಕೂಡಿರುವ (ಜೀವರು) ಪ್ರಾಣಿಗಳು ತಮ್ಮ ತಮ

**ಆನಂತರ್ಯಾರ್ಥಃ ಖ್ಯಾನ ಇತಿ ಬ್ರೂಮಃ । ಕಸ್ಯಾನಂತರಂ? ಮಲ-ಪರಿಪಾಕಾನಂತರಂ ತದಿದಂ ವಿವೃತಂ ಭವಿಷ್ಯತಿ । ಶಿಲ್ಪಮಿತಿ ಕಃ ಪದಾರ್ಥಃ? ಪ್ರಪಂಚಸೃಷ್ಟಿಸೂತ್ರಮಿತಿಬ್ರೂಮಃ । ತತ-**

---

ಅಜ್ಞಾನಕ್ಕನುಸಾರವಾದ ಕರ್ಮಬಂಧಗಳನ್ನನುಭವಿಸುತ್ತಿರುವುದನ್ನು ನೋಡಿ ಆ ಜೀವಕೋಟಿಗಳನ್ನು ಕರ್ಮಪಾಶದಿಂದ ವಿಮುಕ್ತರನ್ನಾಗಿ ಮಾಡಲಿಚ್ಛಿಸಿ ಆ ಪ್ರಾಣಿಗಳ ಜನ್ಮಕರ್ಮಗಳಿಗೆ ಅನುರೂಪವಾಗಿರುವ ವಿಜ್ಞಾನದಿಂದಲೇ ಸುಖವಾಗಿ ಕರ್ಮಬಂಧವನ್ನು ದಾಟುವಂತೆ ಅವರಿಗೆ ವಿಜ್ಞಾನವನ್ನನುಗ್ರಹಿಸಿದನು. ಸತ್ಯಜ್ಞಾನಾನಂದರೂಪನೂ ಅಪಾರ ಮಹಿಮೆಯುಳ್ಳವನೂ ಆದ ಈಶ್ವರನು "ಸ್ವಶಕ್ತಿಪ್ರಕೃತ್ಯಾಭಿಧೇಯ-ಮಾಶ್ರಿತ್ಯ ಲೋಕಾನ್ ಸೃಷ್ಟ್ವಾ" ಎಂಬ ಉಪನಿಷದ್ವಚನದಂತೆ ತನ್ನ ಶಕ್ತಿಯಾದ ಮಾಯೆಯನ್ನು ತಾನು ಆಶ್ರಯಿಸಿಕೊಂಡು ಶಿಲ್ಪವಿಜ್ಞಾನ ವನ್ನು ಪ್ರಕಟಮಾಡಿ ಜೀವಕೋಟಿಗಳು ಮುಕ್ತರಾಗುವಂತೆ ಅನುಗ್ರಹಿಸಿದನು. ಈ ಮಹಿಮೆಯುಳ್ಳ ಪಾರ್ವತೀಸಮೇತನಾದ ಪರಮೇಶ್ವರನು ನಮ್ಮನ್ನು ರಕ್ಷಿಸಲಿ.

ಅಥ ಎಂಬ ಶಬ್ದಕ್ಕೆ ಮಂಗಳ, ಆನಂತರ, ಆರಂಭ, ಪ್ರಶ್ನ ಎಂಬ ನಾಲ್ಕುವಿಧವಾದ ಅರ್ಥಗಳಿರುತ್ತವೆ. ಅವುಗಳಲ್ಲಿ "ಅಥ ಶಿಲ್ಪಾನುಶಾಸನಂ" ಎಂಬ ವಾಕ್ಯದಲ್ಲಿರುವ ಅಥ ಶಬ್ದವು ಯಾವ ಅರ್ಥವನ್ನು ಹೇಳುವುದೆಂದರೆ :—ಅಥ ಶಬ್ದದಿಂದ ಬೋಧಿತವಾದ ಆನಂತರ್ಯವು ಚಿತ್ತಮಲಪರಿಕಾನಂತರವೆಂದು ತಿಳಿಯಬೇಕು. ಚಿತ್ತದಲ್ಲಿರುವ ದೋಷಗಳೆಲ್ಲವೂ ನಾಶವಾದನಂತರ ಚಿತ್ತಶುದ್ಧಿಯುಂಟಾಗಿ ಜ್ಞಾನವೃದ್ಧಿಯಾ

**ಶ್ಚೈತದುಕ್ತಂಭವತಿ, ಸರ್ವೇಷಾಮಪಿಪದಾರ್ಥಾನಾಂ ಸ್ವರೂಪಂ, ತತ್ಪ್ರಮಾಣಂ, ತನ್ನಿರ್ಮಿತಿಕ್ರಮಶ್ಚ ಶಿಲ್ಪಾದೇವ ಭವನ್ತೀತಿ । ಕಥಮಿದಮವಗಮ್ಯತಾಂ? ತದುಚ್ಯತೇ । ಆದೌ ಭೂಃ ಪರೀ- ಕ್ಷ್ಯತೇ, ತದನ್ವಯಂ ಪರಿಗೃಹ್ಯತೇ, ತತಶ್ಚ ಪ್ರಾಚ್ಯಾದಿದಿಶೋಽವ- ಧ್ರಿಯನ್ತೇ, ಮಾನಸಾಧನಾನ್ಯುಪದಿಶ್ಯನ್ತೇ, ಶಂಕುಸ್ಥಾಪನಾನು- ಗುಣಂ ವಿಧೀಯತೇ, ವಾಸ್ತೂನಿ ವಿಭಜ್ಯನ್ತೇ, ಪದವಿನ್ಯಾಸಕ್ರಮ ಆದಿಶ್ಯತೇ, ಗ್ರಾಮನಗರಪುರಪತ್ತನದುರ್ಗಖೇಟಖರ್ವಟಶಿಬಿ - ರಾದಿನಿರ್ಮಿತಯೋಽನುಕ್ರಮ್ಯನ್ತೇ, ದೇವಾಲಯಗೋಪುರ - ಸ್ತೂಪಿಸ್ಥಿರಚರಬೇರಾದಯೋ ನಿರ್ಮೀಯನ್ತೇ, ಯಾಗಶಾಲಾ-**

---

ಗುವುದು. ಜ್ಞಾನದಿಂದ ವಿಶ್ವವೆಲ್ಲವೂ ಸ್ಪಷ್ಟವಾಗಿ ತಿಳಿಯುವುದು. ಈ ಪ್ರಕಾರ ವಿಶ್ವವೆಲ್ಲವನ್ನೂ ತಿಳಿಯುವುದೇ ಶಿಲ್ಪಜ್ಞಾನವಾಗಿರುತ್ತದೆ.

ಶಿಲ್ಪವು ಪ್ರಪಂಚದ ಸೃಷ್ಟಿಸೂತ್ರವಾಗಿರುವುದರಿಂದ ಪ್ರತಿಯೊಂದು ವಸ್ತುವಿನ ಸ್ವರೂಪ, ಅದರ ಪ್ರಮಾಣ ಮತ್ತು ನಿರ್ಮಾಣಕ್ರಮಗಳು ಶಿಲ್ಪದಿಂದಲೇ ಆಗಿರುತ್ತವೆ. ಹೇಗೆಂದರೆ, ಪ್ರಥಮದಲ್ಲಿ ಭೂಪರೀಕ್ಷೆ, ಅನಂತರ ಕ್ರಮವಾಗಿ ಭೂಪರಿಗ್ರಹ, ಪ್ರಾಚೀನಸಾಧನ, ಮಾನಸಾಧನ, ಶಂಕುಸ್ಥಾಪನ, ವಾಸ್ತುವಿಭಾಗ, ಪದವಿನ್ಯಾಸ, ಗ್ರಾಮ, ನಗರ, ಪುರ, ಪತ್ತನ, ದುರ್ಗ, ಖೇಟ, ಖರ್ವಟ, ಶಿಬಿರ ನಿರ್ಮಾಣಗಳು, ದೇವಾಲಯ ಗೋಪುರ ಸ್ತೂಪಿ ಮುಂತಾದವುಗಳು, ಸ್ಥಿರ ಚರ ಬಿಂಬಾದಿಗಳು, ಯಾಗ ಶಾಲಾ ಯಾಗೋಪಕರಣ ಸ್ರುಕ್ ಸ್ರುವ ಕುಂಡಾದಿಗಳು, ಗೃಹ ಭವನ

ತದುಪಕರಣಸ್ರುಕ್ಸ್ರುವಕುಂಡಾದಯಃ ಕ್ರಿಯನ್ತೇ । ಏವಂ ಗೃಹೋಪಕರಣರಥಯಾನಾದೀನಿ, ಜಲಗಗನಸಂಚರಣಸಾಧನಾನಿ ವಿಮಾನಾದೀನಿ, ಕಟಕಮುಕುಟಸ್ಕಂಧಮಾಲೋಪವೀತಾಙ್ಗುಲೀಯಕಾದೀನಿ ಅದಭ್ರಾಣ್ಯಾಯುಧಾನಿ, ಶೈವವೈಷ್ಣವಾದಿಮತಲಾಂಛಾನಾನಿ ಚ ಸಾಧ್ಯನ್ತ ಇತಿ ॥ ನನು ಅಥೇತಿ । ಶಿಲ್ಪೇತಿ ಚಾವಗತಂ । ಕಿಮಿದಮನುಶಾಸನಮಿತಿ । ಉಪನಿಷದ-

---

ಪ್ರಾಸಾದಗಳು, ಗೃಹೋಪಕರಣಗಳು, ರಥಯಾನಾದಿಗಳು. ಜಲಯಾನಗಳು, ಗಗನಸಂಚಾರ ವಿಮಾನಗಳು, ಕಟಕ ಮುಕುಟ ಸ್ಕಂಧಮಾಲಾ ಉಪವೀತ ಅಂಗುಲೀಯಕಗಳು, ಆಯುಧಗಳು, ಶೈವವೈಷ್ಣವಾದಿ ಮತಗಳ ಲಾಂಛನಗಳು ಶಿಲ್ಪನಿರ್ಮಾಣವಾಗಿರುವುದರಿಂದ ಇವುಗಳ ವಿಧಿನಿಯಮಗಳನ್ನು ತಿಳಿಯುವುದೇ ಶಿಲ್ಪವಿಜ್ಞಾನವೆನ್ನಲ್ಪಡುವುದು. ಪ್ರತಿಯೊಂದು ವಸ್ತುವಿನ ಆಕೃತಿಯಿಂದ ಆ ವಸ್ತುಜ್ಞಾನವು ಉಂಟಾಗುವಂತೆ ಬೋಧಿಸುವುದೂ, ತತ್ತತ್ಕರ್ಮಾನುಸಾರವಾದ ಪ್ರಮಾಣದಿಂದ ನಿರ್ಮಾಣಮಾಡುವ ವಿಧಿಯನ್ನು ಬೋಧಿಸುವುದೂ ಸಹ ಶಿಲ್ಪವಿಜ್ಞಾನವೆಂದು ಹೇಳಲ್ಪಡುವುದು.

ಪ್ರಕೃತಸಂದರ್ಭದಲ್ಲಿ ಭಾಷ್ಯದ ಸ್ವರೂಪವೇನೆಂಬುದನ್ನು ಸೂಕ್ಷ್ಮವಾಗಿ ತಿಳಿಸುವುದು ಅವಶ್ಯಕವಾಗಿರುವುದು. ಸೂತ್ರದಲ್ಲಿರುವ ಪದಗಳನ್ನು ಬೇರೆಬೇರೆಯಾಗಿ ವಿಭಾಗಿಸಿ ಅವುಗಳಿಗೆ ಅರ್ಥವನ್ನೂ ವಿವರಿಸುವುದಲ್ಲದೆ ಸಂಬಂಧಪಟ್ಟ ವಿಷಯಗಳನ್ನು ಸ್ವವಾಕ್ಯಗಳಿಂದ ಸಾಧಕ ಬಾಧಕಗಳನ್ನು ಚೆನ್ನಾಗಿ ವಿಮರ್ಶೆಮಾಡಿ ದೋಷಾದಿಗಳನ್ನೂ, ಸಂಶಯ

**ಮನುಸೃತ್ಯ ಶಿಷ್ಯಾಣಾಂ ಬೋಧಾಯ ವಿವರಣಂ ಶಾಸನಮಿತಿ ಬ್ರೂಮಃ । ತನ್ನಿಯದ್ಭಿರರ್ಥೈರರ್ಗರ್ಭಿಣ್ಯಾ ಭಗವತ್ಯಾ ಉಪನಿಷದೋ-ऽಭಿಸಂಧಿಃ ಕ ಇತಿ ಜಿಜ್ಞಾಸಾಯಾಮಾಹ । ಯೋ ಜೀವಾನಿತಿ । ತನ್ನಸಂಬದ್ಧೋऽಯಂ ಯ ಏಷ ಪ್ರಕಟಯತೀತಿ ವರ್ತಮಾ-ನೋಪದೇಶಃ । ನಾಸಂಬದ್ಧಃ ಸ ಸ ಆಚಾರ್ಯ ಆಸ್ಪೃಷ್ಟೇರಾ-**

---

ಗಳನ್ನೂ ಪ್ರಮಾಣಪುರಸ್ಸರವಾಗಿ ಪರಿಹಾರವಾಗುವಂತೆ ವಿವರಿಸುವ ಗ್ರಂಥವನ್ನು ಭಾಷ್ಯವೆಂದು ಹೇಳುವರು. ಈ ಭಾಷ್ಯದಲ್ಲಿ ಮೊದಲನೆಯದಾದ "ಅಥ ಶಿಲ್ಪಾನುಶಾಸನಂ" ಎಂಬ ವಾಕ್ಯದಲ್ಲಿರುವ ಅಥಶಬ್ದವು ಆನಂತರ್ಯರೂಪವಾದ ಅರ್ಥವನ್ನು ವಿವರವಾಗಿ ಬೋಧಿಸಿರುತ್ತದೆ. ಶಿಲ್ಪಶಬ್ದವಿವರಣಾನಂತರ "ಅನುಶಾಸನಂ" ಎಂಬ ಪದದಿಂದ ಶಿಲ್ಪ ವಿದ್ಯಾರಹಸ್ಯೋಪನಿಷತ್ತಿನ ಅರ್ಥವನ್ನು ಶಿಷ್ಯರೆಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತೆ ಬೋಧಿಸುವುದು ಎಂಬ ಅರ್ಥವು ಭಾಸವಾಗುವುದು.

ಇಂತಹ ಅರ್ಥವನ್ನು ಒಳಗೊಂಡಿರುವ ಶಿಲ್ಪವಿದ್ಯಾರಹಸ್ಯೋಪನಿಷತ್ತಿನ ಅಭಿಪ್ರಾಯವನ್ನೇ "ಯೋ ಜೀವಾನ್" ಎಂಬ ಪದ್ಯವು ಸಂಕ್ಷೇಪವಾಗಿ ಬೋಧಿಸುತ್ತದೆ. ಈ ಪದ್ಯದಲ್ಲಿ ಪ್ರಕಟಯತಿ ಎಂದು ವರ್ತಮಾನಕಾಲದ ಕ್ರಿಯಾಪದವನ್ನು, ಆಯಾಯ ಆಚಾರ್ಯನು ಆಯಾಯ ಶಿಷ್ಯನಿಗೆ ಆಯಾಯ ಅರ್ಥಗಳನ್ನು ಈಗಲೂ ಉಪದೇಶ ಮಾಡುತ್ತಿರುವನೆಂದು ತಿಳಿಸುವುದಕ್ಕಾಗಿಯೇ ಉಪಯೋಗಿಸಿರುತ್ತದೆ. ಸೃಷ್ಟಿಕಾಲ ಮೊದಲುಗೊಂಡು ಪ್ರಳಯಕಾಲದವರೆಗೂ ಉಪದೇಶ

ಪ್ರಲಯಮುಪದಿಶತಿ ತತ್ತಚ್ಛಿಷ್ಯಾಯೇತಿ । ನನು ಸತ್ಯಮಾಚಾರ್ಯ ಉಪದಿಶತಿ ನ ಸಾಮ್ಬ ಇತಿ ಅಸಂಬದ್ಧತರಮೇವೇದಂ ವಚನ-ಮಿತಿ ಚೇತ್ ನ । ಕಿಂ ಕಾರಣಂ? ಸಾಂಬ ಆಚಾರ್ಯಮೂರ್ತಿ-ಮಧಿತಿಷ್ಠತೀತಿ । ನನು ನೈವೈವಂ ಜಾನತೇ ಪ್ರತಿಪತ್ತಾರೋಽನ್ಯೇ ವಾ ಯೇನೇಯಂ ಸಾಂಬಾಧಿಷ್ಠಿತಿರವಕಲ್ಪೇತ । ಅವಕಲ್ಪೇತ್ಯೇ-ವೇತಿ ಬ್ರೂಮಃ ನೋ ಖಲು ಶಾಸ್ಯಜ್ಞಾನೇ ವೋದಾಸೀನಜ್ಞಾನೇ ವಾ ಸಾಮ್ಬಾಧಿಷ್ಠಿತಿರಾಯತತೇ ಯಾವತಾ ಶಾಸ್ತ್ರಸಂವೇದ್ಯೈವೈಷ ಸಾಮ್ಬಾಧಿಷ್ಠಿತಿರಾಚಾರ್ಯಮೂರ್ತಿಷ್ಠಿತಿ ವದಾಮಃ ಕಿಂ

---

ಮಾಡುವ ಆಚಾರ್ಯನು ಆಯಾಯ ಆಚಾರ್ಯರೂಪದಿಂದಿರುವ ಪರಮೇಶ್ವರನೇ ಆಗಿರುವನು. ಗುರುವು ಅಥವಾ ಆಚಾರ್ಯನು ಉಪದೇಶಮಾಡುವನೆಂದು ಹೇಳುವುದು ಸತ್ಯವಾಗಿರುವುದಷ್ಟೆ. ಆದರೆ ಪರಮೇಶ್ವರನು ಆಚಾರ್ಯರೂಪದಿಂದ ಇರುತ್ತಾ ಉಪದೇಶಮಾಡು ವನು ಎಂದು ಹೇಳುವುದನ್ನು ನಂಬುವುದಕ್ಕಾಗುವುದಿಲ್ಲ ಎಂದು ಹೇಳು ವುದಾದರೆ ಆಚಾರ್ಯನಲ್ಲಿ ಪರಮೇಶ್ವರನ ಅಂಶವನ್ನು ಕಲ್ಪಿಸಬೇಕು. ಲೋಕದಲ್ಲಿ ಶಾಸನಮಾಡುವ ಜ್ಞಾನವಿರುವಾಗಲೂ, ಲೌಕಿಕವಾದ ವ್ಯವಹಾರಜ್ಞಾನವಿರುವಾಗಲೂ ಈಶ್ವರೀಯ ಜ್ಞಾನವು ಆಚಾರ್ಯ ಮೂರ್ತಿಗತವಾಗಿರುವುದಿಲ್ಲ. ಆದರೆ ಅಧ್ಯಾತ್ಮಜ್ಞಾನವನ್ನು ಶಿಷ್ಯನಿಗೆ ಉಪದೇಶಮಾಡುವ ಕಾಲದಲ್ಲಿ ಮಾತ್ರ ಈಶ್ವರನು ಆಚಾರ್ಯ ಅಥವಾ ಗುರುಮೂರ್ತಿಯ ಅಂತರ್ಗತನಾಗಿರುವನು.

ತಚ್ಛಾಸ್ತ್ರಂ? ತದಾಹ। ಪರಿಪಕ್ವಮಲಾ ಯೇ ತಾನುತ್ಸಾದನ-ಹೇತುಶಕ್ತಿಯೋಗೇನ। ಯೋಜಯತಿ ಪರೇ ತತ್ತ್ವೇ ಸದೀಕ್ಷ-ಯಾಚಾರ್ಯಮೂರ್ತಿಸ್ಥ ಇತಿ। ನನು ಮೋಹಿತರಕ್ಷಣಂ ಮೋಹ-ಹಾಪನಾತ್ಸ್ಯಾತ್ ನ ವಿಜ್ಞಾನದಾನಾತ್ ಸತ್ಯಂ ಕಿಂ ಪುನಃ ಕಾರಣಂ ಮೋಹಸ್ಯೇತಿ ವಿಮರ್ಶನೀಯಂ ಭವತಿ। ನನು ಸ್ಪಷ್ಟಮುಕ್ತಂ ತಮಃ-ಕಾರಣಮಿತಿ ಏವಂ ತರ್ಹಿ ತಮೋವಿಲಸಿತೋ ಮೋಹಸ್ತಮೋ-ನಾಶಾನ್ನಿವರ್ತ್ಸ್ಯತೀತಿ ವಿಜ್ಞಾನೋಪದೇಶ ಉಪಪದ್ಯತೇತರಾಂ।

---

ಪರಿಪಕ್ವಮಲಾ ಯೇ ತಾನುತ್ಸಾದನಹೇತುಶಕ್ತಿಯೋಗೇನ।
ಯೋಜಯತಿ ಪರೇ ತತ್ತ್ವೇ ಸ ದೀಕ್ಷಯಾ ಆಚಾರ್ಯಮೂರ್ತಿಸ್ಥಃ॥

ಎಂಬ ವಚನವು ಈ ಅಭಿಪ್ರಾಯದಲ್ಲಿ ಪ್ರಮಾಣವಾಗಿರುವುದು-ಎಂದರೆ ಪ್ರಾಣಿಗಳ ಚಿತ್ತಗತವಾದ ಆಣವ, ಮಾಯಾ ಕಾರ್ಮಿಕ ಎಂಬ ಮಲಗಳು ನಾಶವಾಗುವ ಕಾಲವನ್ನು ತಿಳಿದು ಅವುಗಳು ಸಂಪೂರ್ಣವಾಗಿ ನಾಶವಾಗುವಂತೆ ಅವರ ಚಿತ್ತದಲ್ಲಿ ಶಕ್ತಿಪಾತವನ್ನುಂಟುಮಾಡುವ ಪರಮೇಶ್ವರನು ಆಚಾರ್ಯಮೂರ್ತಿಗತನಾಗಿ ದೀಕ್ಷೆಯನ್ನು ಕೊಟ್ಟು ಪ್ರಾಣಿಗಳಿಗೆ ಪರತತ್ತ್ವವು ತಿಳಿಯುವಂತೆ ಅನುಗ್ರಹಿಸುವನು ಎಂದು ಉದಾಹೃತವಾಕ್ಯದ ಅರ್ಥವು. ಇದರಿಂದ "ಸ ಏಷ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್" ಎಂಬ ಯೋಗಸೂತ್ರದ ಅರ್ಥವೂ ವಿವೃತವಾಗಿರುತ್ತದೆ.

ಮೋಹಪಾಶಕ್ಕೆ ಸಿಕ್ಕಿರುವವರನ್ನು ರಕ್ಷಿಸಬೇಕಾದರೆ ಅವರ ಮೋಹವನ್ನು ನಾಶಮಾಡುವುದರಿಂದಲೇ ಆಗಬೇಕಾಗಿರುವುದು.

**ಅಜ್ಞಾನಂ ನಾಮ ತಮ ಇತಿ ತದಪಬಾಧಾತ್ಮ ಚ ವಿಜ್ಞಾನಂ ತಾದೃಶೇ ಚ ವಿಜ್ಞಾನೇ ಜಾಗರೂಕೇ ನ ತಮಸ್ತತ್ಕಾರ್ಯಂ ವಾವ-ಸ್ಥಾತುಮರ್ಹತೀತಿ ಸುಷ್ಠೂಕ್ತಂ "ತಮೋಮೋಹಿತಾ ಪಾತು-ಕಾಮಃ ವಿಜ್ಞಾನಂ ದಿತ್ಸುರೇಭ್ಯಃ" ಇತಿ । ಅತ್ರ ಚ ಪಾತುಕಾಮ**

---

ಮೋಹಯುಕ್ತರಾದವರಿಗೆ ವಿಜ್ಞಾನವನ್ನು ಉಪದೇಶಮಾಡುವುದರಿಂದ ಅವರ ರಕ್ಷಣೆಯು ಆಗುವುದಿಲ್ಲವೆಂದು ಸಂಶಯವು ಉಂಟಾಗುವುದು. ಆದರೆ ಮೋಹವುಂಟಾಗಲು ಕಾರಣವೇನೆಂದು ವಿಮರ್ಶೆಮಾಡಿದರೆ ಅಜ್ಞಾನವೇ ಮೋಹಕ್ಕೆ ಕಾರಣವೆಂದು ಸ್ಪಷ್ಟವಾಗಿ ತಿಳಿಯಬರುವುದು. ಅಜ್ಞಾನದಿಂದ ಉಂಟಾದ ಮೋಹವು ತನಗೆ ಕಾರಣವಾದ ಅಜ್ಞಾನವು ನಾಶವಾಗುವುದರಮೂಲಕ ನಾಶವಾಗುವುದು. ಈ ಅಜ್ಞಾನವು ನಾಶ ವಾಗುವುದಕ್ಕೆ ವಿಜ್ಞಾನೋಪದೇಶವು ಅವಶ್ಯಕವಾಗಿರುತ್ತದೆ. ಅಜ್ಞಾನ ವೆಂಬುವುದೇ ತಮಸ್ಸೆಂದು ವ್ಯವಹರಿಸಲ್ಪಡುವುದು. ಅಜ್ಞಾನವನ್ನು ಬಾಧಿಸುವ ಅಥವಾ ನಾಶಮಾಡುವ ಶಕ್ತಿಯು ವಿಜ್ಞಾನದಲ್ಲಿರುವುದು ಎಂದರೆ ಅಜ್ಞಾನವನ್ನು ನಾಶಮಾಡುವ ಸಾಮರ್ಥ್ಯವುಳ್ಳ ವಿಜ್ಞಾನವು ಪ್ರಾಣಿಗಳಲ್ಲಿ ಪ್ರಭಾವಯುಕ್ತವಾಗಿ ಇರುವಾಗ ಅಜ್ಞಾನವೂ ಅದರ ಕಾರ್ಯವಾದ ಮೋಹವೂ ಸ್ಥಿರವಾಗಿ ಇರಲು ಸಾಧ್ಯವಾಗುವುದಿಲ್ಲ. ಇದೇ ಅಭಿಪ್ರಾಯದಿಂದಲೇ "**ತಮೋಮೋಹಿತಾನ್ ಪಾತುಕಾಮಃ ವಿಜ್ಞಾನಂ ದಿತ್ಸುರೇಭ್ಯಃ**" ಎಂದು ಉಕ್ತವಾಗಿರುತ್ತದೆ.

**ಪಾತುಕಾಮಃ** ಎಂಬ ಪದದಿಂದ ವಿಪತ್ತುಗಳಿಗೀಡಾದವರನ್ನು

**ಇತಿ ರಕ್ಷಣೇಚ್ಛಾವಾದಃ ಆಪದೋ ಗಮಯತಿ । ತತಶ್ಚಾಪನ್ನಾನ್ ಸರ್ವಾನ್ ಪಾತುಕಾಮ ಇತಿ ಸ್ಥಿತಂ । ನನು ತಮ ಏಕಂ ತಜ್ಜನ್ಯೋ ಮೋಹಶ್ಚೈಕಃ ಸ್ಯಾತ್ । ತತಶ್ಚ ಮೋಹಿತೈರಪ್ಯೇಕ-ವಿಧೈರ್ಭಾವ್ಯಂ । ನೈವ ತ್ವೇಕವಿಧಾನ್ ಪಶ್ಯಾಮಃ । ತದಿಹಾನ್ಯದೇವ ಕಾರಣಂ ಸ್ಯಾತ್ ವಿಚಿತ್ರತರಾಪದಾಂ । ತಸ್ಮಾದ್ವಿಜ್ಞಾನದಾನ-ವಾದೋ ನೋಪಪದ್ಯತ ಇತಿ ಚೇನ್ನ । ಅನಾದಿರ್ಹಿ ಸಂಸಾರಃ**

---

ರಕ್ಷಿಸಲು ಇಚ್ಛೆಯುಳ್ಳವನೆಂದು ಅರ್ಥವಾಗುತ್ತದೆ. ಆದುದರಿಂದ ಪರಮೇಶ್ವರನು, ಅಜ್ಞಾನದಿಂದ ಮೋಹವನ್ನು ಹೊಂದಿ ವಿಪತ್ತಿಗೆ ಈಡಾಗಿರುವ ಪ್ರಾಣಿಗಳನ್ನು ರಕ್ಷಿಸುವ ಅಭಿಲಾಷೆಯುಳ್ಳವನಾಗಿರುವನು ಎಂದು ತಾತ್ಪರ್ಯವು.

ಅಜ್ಞಾನವೆಂಬುದು ಒಂದೇ ಆಗಿರುವುದು. ಇದರಿಂದ ಉಂಟಾಗಿರುವ ಮೋಹವೂ ಕೂಡ ಒಂದೇ ಆಗಿರುವುದು. ಹೀಗಿರುವಲ್ಲಿ ಮೋಹಗೊಂಡಿರುವವರೂ ಕೂಡ ಇದರಂತೆ ಒಂದೇವಿಧವಾಗಿರಬೇಕು. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಏಕೆಂದರೆ ಮೋಹಗೊಂಡಿರುವವರು ಒಂದೇವಿಧವಾಗಿಲ್ಲದೆ ಬೇರೆಬೇರೆ ವಿಧವಾಗಿರುವರು. ಇದಕ್ಕೆ ಕಾರಣವು ಯಾವುದೋ ಒಂದು ಬೇರೆಯಾಗಿರಬೇಕು. ಇದರಿಂದ ಪ್ರಾಣಿಗಳಿಗೆ ಅನೇಕ ವಿಪತ್ತುಗಳು ಉಂಟಾಗುತ್ತಿರುವವು. ಆದಕಾರಣ ವಿಜ್ಞಾನೋಪದೇಶವು ಈ ನಾನಾವಿಧವಾದ ವಿಪತ್ತುಗಳನ್ನು ಪರಿಹರಿಸಲು ಸಾಮರ್ಥ್ಯವುಳ್ಳದ್ದಾಗಿರುವುದಿಲ್ಲ ಎಂದು ಕೆಲವರು ಹೇಳುತ್ತಾರೆ.

**ತತ್ತದ್ಭುವನತತಿಜನಿತಕರ್ಮಣಾಂ ಚ ಕೋಟೇರ್ಗಣಯಿತುಂ ನೇಂದ್ರೋऽಪೀಷ್ಟೇ। ಇಯಂತ್ಯಪಿ ಕರ್ಮಾಣಿ ಮೋಹವೈಚಿತ್ರ್ಯೇ ಏವಾಯತಂತೇ। ತತಶ್ಚಾಯಂ ಕ್ರಮಃ-ವಿಚಿತ್ರಮೋಹೈರ್ವಿಚಿತ್ರ-ಕರ್ಮಾಣಿ ವಿಚಿತ್ರಕರ್ಮಭಿರ್ವಿಚಿತ್ರಾಪದಃ ತತ್ತದಾಪನ್ನಿವರ್ತನಕ್ಷಮಾಣಿ ವಿಜ್ಞಾನಾನಿ ಚ ವಿಚಿತ್ರಾಣಿ ತಾನಿ ಚ ಜ್ಞಾನಾನಿ ಶಿಲ್ಪವೇದೇ ಆಯತಂತ ಇತಿ ತತ್ಪ್ರಕಟನಮಿತಿ। ತದಿದಮುಕ್ತಂ। "ತಮೋ-**

---

ಇವಕ್ಕೆ ಸಮಾಧಾನವನ್ನು ಈರೀತಿ ಹೇಳಬಹುದು—ಸಂಸಾರ ವೆಂಬುದು ಅನಾದಿಯಾಗಿರುವುದು. ಸಂಸಾರವೆಂದರೆ ಪ್ರಾಣಿಗಳ ಜನನ ಮರಣರೂಪವಾದ ಉತ್ಪತ್ತಿವಿನಾಶಗಳು ಎಂದಭಿಪ್ರಾಯವು. ಪ್ರಾಣಿ ಗಳು ತಮ್ಮ ಅನೇಕ ಜನ್ಮಗಳಲ್ಲಿ ಮಾಡಿರುವ ಕರ್ಮಗಳನ್ನು ಎಣಿಕೆ ಮಾಡುವುದಕ್ಕೆ ಇಂದ್ರನಿಗೂ ಶಕ್ತಿಯಿರುವುದಿಲ್ಲ. ಎಣಿಸಲು ಆಗದೆ ಇರುವ ಕೋಟಿಸಂಖ್ಯಾಕವಾದ ವಿಧವಿಧ ಕರ್ಮಗಳು ಅನೇಕವಿಧ ವಾದ ಮೋಹಪರಂಪರೆಯಿಂದ ಕರ್ಮಗಳನ್ನು ಮಾಡುತ್ತಿರುವ ಪ್ರಾಣಿಗಳಿಗೆ ಅನೇಕವಿಧವಾದ ವಿಪತ್ತುಗಳು ಉಂಟಾಗುತ್ತಿರುವುವು. ವಿಚಿತ್ರವೂ ಅನೇಕವಿಧವೂ ಆದ ಇಂತಹ ವಿಪತ್ತುಗಳನ್ನು ನಾಶ ಮಾಡುವ ಶಕ್ತಿಯುಳ್ಳ ಅನೇಕ ವಿಜ್ಞಾನಗಳಿರುವುವು. ಇವುಗಳ ಜ್ಞಾನವು ಶಿಲ್ಪಜ್ಞಾನದಿಂದ ಉಂಟಾಗುವುದು. ಆದುದರಿಂದ ಶಿಲ್ಪಜ್ಞಾನಪ್ರಕಟನವು ಅತ್ಯಾವಶ್ಯಕವೆಂದು ಬೋಧಿಸಲ್ಪಟ್ಟಿರು ವುದು.

ಇದೇ ಅಭಿಪ್ರಾಯದಿಂದಲೇ, ಅಜ್ಞಾನದಿಂದ ಮೂಢರಾದವರೂ

**ಮೋಹಿತಾನ್ ಕರ್ಮವಶ್ಯಾನ್ ಜೀವಾನ್ ಪಾತುಕಾಮಃ ಭವತತಿಜನಿ-ತಾನೇಕಕರ್ಮಾನುರೂಪಂ ವಿಜ್ಞಾನಮೇಭ್ಯೋ ದಿತ್ಸುಃ ವೇದ-ಶಿಲ್ಪಂ ಪ್ರಕಟಯತೀತಿ"। ಕರ್ಮವಶ್ಯಾನಿತಿ। ಭವತತಿಜನಿತಾನೇಕ-ಕರ್ಮವಶ್ಯಾನಿತಿ ಗ್ರಹೀತವ್ಯಂ ನಿವರ್ತಕವಿಜ್ಞಾನಾನುರೂಪ್ಯಾಯ। ನನು ತದ್ರೂಪಃ ಪರಃ ಶಿವಃ ಅನಂತದಿವ್ಯತೇಜೋಮಯ ಇತಿ ಉಪನಿಷದಾ ತ್ರಿವಿಧಪರಿಚ್ಛೇದರಹಿತೋ ಬೋಧ್ಯತೇ ವಸ್ತುಪರಿ-**

---

ಕರ್ಮಗಳಿಗೆ ಅಧೀನರೂ ಆದ ಜೀವರುಗಳನ್ನು (ಪ್ರಾಣಿಗಳನ್ನು) ರಕ್ಷಿಸ ಬೇಕೆಂಬ ಇಚ್ಛೆಯಿಂದ ಪರಮೇಶ್ವರನು, ಅನೇಕ ಜನ್ಮಗಳಲ್ಲಿ ಪ್ರಾಣಿ ಗಳು ಆರ್ಜಿಸಿದ ಬಹುವಿಧವಾದ ಕರ್ಮಗಳನ್ನು ನಾಶಮಾಡುವುದಕ್ಕಾಗಿ ಅವರಿಗೆ ವಿಜ್ಞಾನವನ್ನು ಉಪದೇಶಮಾಡಬೇಕೆಂದು ವೇದಶಿಲ್ಪವನ್ನು ಪ್ರಕಟಿಸಿರುವನು ಎಂದು ಹೇಳಿರುತ್ತದೆ. ಕರ್ಮವಶ್ಯಾನ್ ಎಂಬ ಪದಕ್ಕೆ, ಬಹುಜನ್ಮಗಳ ಸಮೂಹದಿಂದ ಉಂಟಾದ ನಾನಾವಿಧ ಕರ್ಮ ಗಳಿಗೆ ಅಧೀನರಾಗಿ ತೊಳಲುತ್ತಿರುವ ಜೀವರುಗಳನ್ನು ಎಂದರ್ಥವು. ಇಂತಹ ಜೀವರುಗಳನ್ನು ವಿಜ್ಞಾನೋಪದೇಶದಿಂದ ರಕ್ಷಿಸಿ ಉದ್ಧರಿಸು ವುದಕ್ಕಾಗಿಯೇ ಪರಮೇಶ್ವರನು ವೇದಶಿಲ್ಪವನ್ನು ಪ್ರಕಟಿಸಿರುವನು ಎಂದಭಿಪ್ರಾಯವು.

ಉಪನಿಷತ್ತುಗಳು ಈಶ್ವರನನ್ನು ಇಂತು ವರ್ಣಿಸುವವು—ಪರಶಿವನು ಸದ್ರೂಪದಿಂದ ಇರುವನು. ಅವನು ಅನಂತದಿವ್ಯತೇಜೋ ಮಯನು. ಅವನಿಗೆ ದೇಶಕಾಲವಸ್ತುಗಳ ಪರಿಚ್ಛೇದವಿಲ್ಲ ಎಂದರೆ ಅವನು ಎಲ್ಲಾ ಸ್ಥಳಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ವಸ್ತು

ಅಜ್ಞಾನಪದವಾಚ್ಯಶ್ಚ ಪರಶಿವಶಕ್ತಿರೂಪಃ ತತೋ ಮೋಹಃ
ತತಃ ಕರ್ಮಾಣಿ ತತ ಆಪದಃ ಪ್ರವರ್ತಂತ ಇತಿ ತತ್ತನ್ಮೂಲ-
ನಿವರ್ತಕವಿಜ್ಞಾನಾನ್ಯನೇಕಾನ್ಯಪೇಕ್ಷ್ಯಂತ ಏವೇತಿ ತಾದೃಗ್ಜ್ಞಾನ-
ಬೋಧಕಶಿಲ್ಪವೇದಪ್ರಕಟನಮತ್ಯಂತಮಪೇಕ್ಷಿತಮೇವೇತಿ ।
ತದಿದಮುಕ್ತಂ । ಸಜ್ಞಾನಾನಂದರೂಪೋऽಪ್ಯಗಣಿತಮಹಿಮಾ-
ಸ್ವಾತ್ಮಮಾಯಾಂ ಸ್ವಶಕ್ತಿಂ ಸಂಗೃಹ್ಣನ್ ಸಾಂಬಮೂರ್ತಿಃ ವೇದ-
ಶಿಲ್ಪಂ ಪ್ರಕಟಯತಿತರಾಮಿತಿ । ಸುಗಮಮನ್ಯತ್ । ತದಿದಮವನ

---

ಯುತ್ತಾರೆ. ಇದೇ ಪರಶಿವನ ಶಕ್ತಿಯ ರೂಪದಿಂದ ಇರುವುದು. ಈ
ಶಕ್ತಿಯಿಂದಲೇ ಅಜ್ಞಾನವು ಅಥವಾ ಮೋಹವು ಉಂಟಾಗುವುದು.
ಆದರಿಂದಲೇ ಕರ್ಮಗಳೂ, ಆ ಕರ್ಮಗಳಿಂದ ಆಪತ್ತುಗಳೂ ಉಂಟಾ
ಗುವವು. ಆದುದರಿಂದ ಆಯಾಯ ಮೂಲಕಾರಣಗಳನ್ನು ನಾಶಪಡಿ
ಸುವುದಕ್ಕಾಗಿ ವಿಜ್ಞಾನಗಳೂ ಅನೇಕವಾಗಿರುವವು ಮತ್ತು ಆ ಪ್ರಕಾರ
ವಾದ ವಿಪನ್ನಿವರ್ತಕವಾದ ಜ್ಞಾನವನ್ನು ಬೋಧಿಸುವ ಶಿಲ್ಪವೇದ
ಪ್ರಕಟನವು ಅತ್ಯವಶ್ಯಕವಾದದ್ದೆಂದು ಹೇಳಲೇಬೇಕಾಗಿರುವುದು.

ಸಜ್ಞಾನಾನಂದಸ್ವರೂಪನಾದ ಮಹೇಶ್ವರನು ಅಪಾರವಾದ
ಮಹಿಮೆಯುಳ್ಳ ತನ್ನ ಶಕ್ತಿಯನ್ನೂ ಮಾಯೆಯನ್ನೂ ತನ್ನಧೀನದ
ಲ್ಲಿರಿಸಿಕೊಂಡು ವೇದಶಿಲ್ಪವನ್ನು ಪ್ರಕಟಮಾಡಿರುತ್ತಾನೆಂದು ನಿಷ್ಕೃಷ್ಟ
ವಾದ ಅಭಿಪ್ರಾಯವು. ಸಾಂಬಮೂರ್ತಿಯು ಈ ಪ್ರಕಾರದಿಂದಲೇ
ಎಲ್ಲರನ್ನೂ ರಕ್ಷಿಸುವನೆಂದು ಪರಮಪೂಜ್ಯವಾದ ಉಪನಿಷದ್ಗ್ರಂಥವು

**ಭಗವತೀ ಉಪನಿಷತ್ ಶಿಷ್ಯಪ್ರಾರ್ಥನರೂಪಂ ದರ್ಶಯಂತೀ ಪ್ರವರ್ತತೇ—ಸಹ ನಾವವತ್ವಿತಿ । ಅತ್ರ ಶಿಷ್ಯವರ್ಗ ಆಚಾರ್ಯವರ್ಗಶ್ಚ ದ್ವಾವರ್ಥೌ ದ್ವಿವಚನನಿರ್ದಿಷ್ಟೌ ಶಿಷ್ಯೋಽರ್ಥಯಿತಾ ಗುರುಪುರಸ್ಸರಃ । ದೀಪಕಾಲಂಕಾರವಿಧಯಾ ನಿರ್ದೇಶಃ । ಹೇ ಸಾಂಬಮೂರ್ತೇ ಯಥಾ ಮಮಾಚಾರ್ಯಂ ಶಿಲ್ಪವೇದಪ್ರಕಟನಾದ್ರಕ್ಷಿತವಾನಸಿ ತಥೈವ ಮಾಮಪಿ ರಕ್ಷೇತಿ ತದರ್ಥಃ । ರಕ್ಷಣಸ್ವರೂಪಮೇವ ವಿವೃಣೋತಿ "ಸಹ ನೌ ಭುನಕ್ತು" ಇತಿ । ಯಥಾ ಅಜ್ಞಾನ**

---

ಬೋಧಿಸುವುದು ಶಿಷ್ಯನೂ ಕೂಡ ಇದನ್ನು ಪ್ರಾರ್ಥನೆಮಾಡುವನೆಂದು "ಸಹ ನಾವವತು" ಎಂಬ ಮಂತ್ರದಿಂದ ಉಪನಿಷತ್ತು ಸ್ಪಷ್ಟಪಡಿಸಿರುವುದು. ಈ ಮಂತ್ರದಲ್ಲಿರುವ "ನೌ" "ನಮ್ಮಿಬ್ಬರನ್ನೂ" ಎಂಬ ದ್ವಿವಚನ ಸರ್ವನಾಮಶಬ್ದವು ಶಿಷ್ಯವರ್ಗ ಮತ್ತು ಆಚಾರ್ಯವರ್ಗ ಎಂಬೆರಡನ್ನೂ ನಿರ್ದೇಶಮಾಡುವುದು. ಶಿಷ್ಯನು ಗುರುವನ್ನು ಮುಂದಿರಿಸಿಕೊಂಡು ರಕ್ಷಣೆಯನ್ನು ಬೇಡುತ್ತಾನೆ. "ಅವತು" ಎಂಬ ಕ್ರಿಯಾಪದವು ಶಿಷ್ಯ ಮತ್ತು ಗುರುಶಬ್ದಗಳೆರಡಕ್ಕೂ ಸಂಬಂಧಿಸಿರುವ ಕಾರಣ ದೀಪಕಾಲಂಕಾರರೀತಿಯಿಂದ ಈ ವಾಕ್ಯದ ಅರ್ಥವು ನಿರ್ದಿಷ್ಟವಾಗಿರುತ್ತದೆ.

"ಸಹ ನಾವವತು" ಎಂಬ ವಾಕ್ಯಕ್ಕೆ "ಎಲೈ ಸಾಂಬಮೂರ್ತಿಯಾದ ಪರಶಿವನೇ, ನೀನು ಶಿಲ್ಪವೇದವನ್ನು ಪ್ರಕಟನಮಾಡುವುದರ ಮೂಲಕ ನನ್ನ ಗುರುವನ್ನೂ ರಕ್ಷಿಸುತ್ತಿರುವ ಹಾಗೆ ನನ್ನನ್ನೂ ರಕ್ಷಿಸು" ಎಂದರ್ಥವು. ಈ ವಾಕ್ಯಗತವಾದ ರಕ್ಷಣವು "ಸಹ ನೌ ಭುನಕ್ತು" ಎಂಬ ವಾಕ್ಯದಿಂದ ವಿವೃತವಾಗಿರುತ್ತದೆ. "ಎಲೈ ಸಾಂಬಮೂರ್ತಿ

**ನಿವರ್ತನೇನ ಆನಂದಭೋಗೋಽಭವದಾಚಾರ್ಯಸ್ಯ ಏವಂ ಮಮಾಪ್ಯಾನಂದಂ ಭೋಜಯೇತಿ ಪ್ರಾರ್ಥನಾಯಾಂ ಸರ್ವತ್ರ ಲೋಟ್ । ಅಪರಿಮಿತಶಕ್ತಿಕಾಜ್ಞಾನನಿವರ್ತನೇ ಜ್ಞಾನವೀರ್ಯಂ ಗುರುಃ ಯಥಾ ಅಕರೋತ್ತಥಾಹಮಪಿ ಕುರ್ಯಾಮಿತ್ಯರ್ಥಃ। "ಸಹ ವೀರ್ಯಂ ಕರವಾವಹೈ" ಇತಿ ತದೇವ ವೀರ್ಯಂ ವಿವೃಣೋತಿ "ತೇಜ**

---

ಯವಾದ ಪರಮೇಶ್ವರನೇ, ನೀನು ಶಿಲ್ಪವೇದಪ್ರಕಟನದಿಂದ ನನ್ನ ಗುರುವಿನ ಅಜ್ಞಾನವನ್ನು ನಾಶಗೊಳಿಸಿ ಗುರುವಿಗೆ ಆನಂದಾನುಭವ ವುಂಟಾಗುವಂತೆ ಮಾಡಿರುತ್ತೀಯೆ. ಅದರಂತೆಯೇ ನನಗೂ ಕೂಡ ಅಜ್ಞಾನ ನಷ್ಟವಾಗಿ ಆನಂದಾನುಭವವುಂಟಾಗುವಂತೆ ಅನುಗ್ರಹವನ್ನು ಮಾಡು" ಎಂಬ ಶಿಷ್ಯನ ಪ್ರಾರ್ಥನೆಯನ್ನು "ಸಹ ನೌ ಭುನಕ್ತು" ಎಂಬ ವಾಕ್ಯವು ಹೇಳುತ್ತದೆ. ಪ್ರಾರ್ಥನೆಯನ್ನು ಬೋಧಿಸುವುದ ಕ್ಕಾಗಿಯೇ **ಅವತು, ಭುನಕ್ತು, ಕರವಾವಹೈ,** ವಿದ್ವಿಷಾವಹೈ ಎಂಬ ಕ್ರಿಯಾವಾಚಕಶಬ್ದಗಳು ಲೋಟಂತವಾಗಿಯೇ ಪ್ರಯೋಗಿಸಲ್ಪಟ್ಟಿ ರುವವು.

**"ಸಹ ವೀರ್ಯಂ ಕರವಾವಹೈ"** ಎಂಬ ವಾಕ್ಯದಿಂದಲೂ ಅಪರಿ ಮಿತವಾದ ಶಕ್ತಿಯುಳ್ಳ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನಶಕ್ತಿ ಯುಳ್ಳವನನ್ನಾಗಿ ಗುರುವು ನನ್ನನ್ನು ಮಾಡಿರುವಹಾಗೆ ನಾನೂ ಕೂಡ ಇನ್ನೊಬ್ಬನನ್ನು (ನನ್ನ ಶಿಷ್ಯನನ್ನು) ಅನುಗ್ರಹಮಾಡುವಂತೆ ಜ್ಞಾನ ವೀರ್ಯವನ್ನು ನನಗೆ ಅನುಗ್ರಹಿಸು ಎಂಬ ಪ್ರಾರ್ಥನೆಯು ಬೋಧಿತ ವಾಗಿರುತ್ತದೆ. **"ತೇಜಸ್ವಿನಾವಧೀತಮಸ್ತು"** ಎಂಬ ವಾಕ್ಯವು ಈ

**ಸ್ವಿನಾವಧೀತಮಸ್ತ್ವಿತಿ"। ಭಾವೇ ಕ್ತಃ ಇಣ್ ಧಾತೋರಧಿಪೂರ್ವಸ್ಯ। ಗತ್ಯರ್ಥಾ ಧಾತವೋ ಜ್ಞಾನಾರ್ಥಾಃ। ತಥಾ ಚ ಅಧೀತಜ್ಞಾನಂ ತೇಜಸ್ವಿ ಅಸ್ತು ಊರ್ಜಿತಮಸ್ತು ಅತಿದೃಢಂ ನೈಕಶಕ್ತಿಕಾಜ್ಞಾನ-ನಿವರ್ತನಕ್ಷಮಂ ಗುರೋರಿವೇತಿ ಭಾವಃ। ಈದೃಶಜ್ಞಾನವತಃ ಲಕ್ಷಣ-ಮಾಹ। "ಮಾ ವಿದ್ವಿಷಾವಹೈ" ಇತಿ ಯಥಾ ಗುರೋಃ ಕಸ್ಯಾಪಿ ವಿಷಯೇ ವಿದ್ವೇಷಾಭಾವೇನ ಜ್ಞಾನದಾರ್ಢ್ಯಂ ದೃಷ್ಟಂ ತಥಾ ಮಮಾಪಿ ಭವತ್ವಿತಿ ತದರ್ಥಃ। ಈದೃಶಜ್ಞಾನಮಹಿಮ್ನಾ**

ಪ್ರಕಾರವಾದ ಜ್ಞಾನಸಾಮರ್ಥ್ಯವನ್ನು ವಿವರಿಸುವುದು. **ಅಧಿ** ಎಂಬ ಉಪಸರ್ಗಪೂರ್ವಕವಾದ **ಇಣ್** ಧಾತುವಿಗೆ ಭಾವಾರ್ಥದಲ್ಲಿ **ಕ್ತ** ಪ್ರತ್ಯಯವು ಬಂದಿರುವುದರಿಂದ **ಅಧೀತಂ** ಎಂದು ಪದವಾಗಿರುತ್ತದೆ. ಗತ್ಯರ್ಥವಾಚಕಗಳಾದ ಧಾತುಗಳೆಲ್ಲವೂ ಜ್ಞಾನಾರ್ಥವನ್ನು ಬೋಧಿಸುತ್ತವೆ. "ತೇಜಸ್ವಿನಾವಧೀತಮಸ್ತು" ಎಂದರೆ, ನಮ್ಮ ಜ್ಞಾನವು ಗುರುವಿನ ಜ್ಞಾನದಂತೆ ಅನೇಕವಿಧವಾದ ಸಾಮರ್ಥ್ಯವುಳ್ಳ ಅಜ್ಞಾನವನ್ನು ನಾಶಮಾಡುವುದರಲ್ಲಿ ಶಕ್ತಿಯುಳ್ಳದ್ದಾಗಿ ಊರ್ಜಿತವಾಗಿರಲಿ ಎಂದು ಪ್ರಾರ್ಥನೆಯು.

ಈ ರೀತಿಯಾದ ಜ್ಞಾನವನ್ನು ಹೊಂದಿರುವ ಗುರುಶಿಷ್ಯರಾದ ನಾವಿಬ್ಬರೂ ಪರಸ್ಪರ ದ್ವೇಷಿಸಬಾರದು ಎಂದು **"ಮಾ ವಿದ್ವಿಷಾವಹೈ"** ಎಂಬ ವಾಕ್ಯವು ಬೋಧಿಸುವುದು. ಗುರುವಿಗೆ ಯಾವ ವಿಷಯದಲ್ಲಿಯೂ ದ್ವೇಷವಿಲ್ಲದೆ ಜ್ಞಾನದಾರ್ಢ್ಯವಿರುವಂತೆ ಶಿಷ್ಯನಾದ ನನಗೂ ಜ್ಞಾನದಾರ್ಢ್ಯವು ಉಂಟಾಗಲಿ ಎಂದು ಈ ವಾಕ್ಯದ ಅಭಿಪ್ರಾಯವು.

ಆಧ್ಯಾತ್ಮಿಕಾಧಿದೈವಿಕಾಧಿಭೌತಿಕದುಃಖಾಗ್ನೀನಾಂ ಶಾಂತಿರ್ಭವ-ತ್ವಿತಿ ಅಜ್ಞಾನಾಖ್ಯಮಹಾಂಧಕಾರಾದ್ರಕ್ಷಕಪರಮೇಶ್ವರಾವ - ಬೋಧಕೇನ ಓಂಕಾರೇಣ ಸಂಬೋಧ್ಯ ಪ್ರಾರ್ಥಯತೇ "ಓಂ ಶಾನ್ತಿಃ ಶಾನ್ತಿಃ ಶಾನ್ತಿಃ"ರಿತಿ ॥

ಸಹ ನಾವವತ್ವಿತ್ಯಾದಿಮಂತ್ರಸೂತ್ರಿತಮರ್ಥಜಾತಂ ವಿವೃ-ಣ್ವತೀ ಭಗವತೀ ಉಪನಿಷತ್ಪ್ರವರ್ತತೇ । ಅಥ ಶಿಲ್ಪವಿದ್ಯಾ-

---

ಈ ಪ್ರಕಾರವಾದ ಜ್ಞಾನದ ಮಹಿಮೆಯಿಂದಲೇ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಎಂಬ ಮೂರುವಿಧವಾದ ತಾಪತ್ರಯಗಳೂ ಶಾಂತವಾಗಲಿ. ಆಧಿದೈವಿಕವೇ ಮೊದಲಾದ ಈ ತಾಪತ್ರಯಗಳು ಅಗ್ನಿಯಂತೆ ದುಃಖವನ್ನು ಹೆಚ್ಚಿಸಿ ಸಂಕಟಪಡಿಸುವಕಾರಣ, ಇವುಗಳ ವೇಗವು ಜ್ಞಾನದಾರ್ಢ್ಯದ ಮಹಿಮೆಯಿಂದ ಉಪಶಾಂತವಾಗಲಿ ಎಂಬ ಪ್ರಾರ್ಥನೆಯು ಬೋಧಿತವಾಗಿರುತ್ತದೆ. ಅಜ್ಞಾನವೆಂಬ ಕಗ್ಗತ್ತಲೆಯಿಂದ ಕಾಪಾಡುವ ಪರಮೇಶ್ವರನನ್ನು ಓಂಕಾರದಿಂದಲೇ ಸಂಬೋಧನೆಮಾಡಿ "ಓಂ ಶಾಂತಿಃ ಶಾಂತಿಃ ಶಾಂತಿಃ" ಎಂದು ದುಃಖಶಾಂತಿಗಾಗಿ ಪ್ರಾರ್ಥನೆಮಾಡಲ್ಪಟ್ಟಿರುವುದು.

"ಸಹ ನಾವವತು" ಮೊದಲಾದ ಮಂತ್ರಗಳು ಈ ಉಪನಿಷತ್ತಿನಲ್ಲಿ ಸೂತ್ರಬದ್ಧವಾಕ್ಯಗಳಂತೆ ಅತಿಗಂಭೀರಶೈಲಿಯಿಂದ ಉಕ್ತವಾಗಿರುವುದಲ್ಲದೆ ಈ ಉಪನಿಷತ್ತಿನ ಅರ್ಥವನ್ನು ಬೋಧಿಸಲು "ಅಥ ಮಹಾ ಶಿಲ್ಪೋಪನಿಷದಂ ವ್ಯಾಖ್ಯಾಸ್ಯಾಮಃ" ಎಂದು ಪ್ರಾರಂಭಿಸಲ್ಪಡುವುದು.

**ರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮ ಇತಿ । ಮಲಪಾಕಂ ಶಿಷ್ಯನಿಷ್ಠಮವಗತ್ಯೇತಿ ಅಥ ಶಬ್ದಾರ್ಥಃ । ಯದರ್ಥಮುಕ್ತಂ ಪರಿಪಕ್ವೇತಿ....ಪ್ರಮಾಣಂ । ಕೇ ಪುನರತ್ರ ವ್ಯಾಖ್ಯಾತಾ-ರೋಽಸ್ಮದರ್ಥಾಃ । ಪರಃ ಶಿವ ಇತಿ ಬ್ರೂಮಃ । ನನ್ವೇಕಃ ಸಃ । ನ ಚೈಕಸ್ಮಿನ್ ಬಹುವಚನಂ ಘಟತೇ । ಘಟತ ಇತಿ ಬ್ರೂಮಃ । "ಅಸ್ಮದೋದ್ವಯೋರಿತಿ" ಯತಃ ಪಾಣಿನೇ-**

---

ಅಥ ಶಬ್ದಕ್ಕೆ ಹಿಂದೆ ಹೇಳಿದಂತೆ ಅನೇಕಾರ್ಥಗಳಿದ್ದರೂ ಪ್ರಕೃತ ಸಂದರ್ಭದಲ್ಲಿ ಅನಂತರ ಎಂಬರ್ಥವು. ಅನಂತರವೆಂದರೆ ಯಾವ ಅನಂತರ ಎಂಬ ಪ್ರಶ್ನೆಯು ಉತ್ಪವಿಸುವುದು. ಇದಕ್ಕೆ ಆಣವ, ತಾಮಸ, ಕಾರ್ಮಿಕಗಳೆಂಬ ಮೂರು ವಿಧವಾದ ಶಿಷ್ಯನ ಮಲಪರಿಪಕ್ವ ಭಾವವನ್ನು ತಿಳಿದನಂತರ ಎಂದು ಅರ್ಥವು. ಈ ಅಭಿಪ್ರಾಯವನ್ನು ಅನುಸರಿಸಿಯೇ ಹಿಂದೆ "ಪರಿಪಕ್ವಮಲಾ ಯೇ ತಾನುತ್ಸಾದನಶಕ್ತಿ ಯೋಗೇನ | ಯೋಜಯತಿ ಪರೇ ತತ್ತ್ವೇ ಸ ದೀಕ್ಷಯಾಚಾರ್ಯ-ಮೂರ್ತಿಸ್ಥಃ" ಎಂಬ ಪ್ರಮಾಣವಚನವು ಉದಾಹೃತವಾಗಿರುವುದು. ಅಸ್ಮಚ್ಛಬ್ದದಿಂದ ಇಲ್ಲಿ ಅಹಂ ಪ್ರತೀತಿಗಮ್ಯನಾದ ಪರಶಿವನೇ ಈ ಉಪನಿಷತ್ತನ್ನು ವಿವರಿಸಿರುವನು ಎಂದು ತಿಳಿಯಬೇಕು. ಪರಶಿವನು ಒಬ್ಬನೇ ಆದರೂ "ವ್ಯಾಖ್ಯಾತಾರಃ, ಅಸ್ಮದರ್ಥಾಃ" ಎಂದು ಬಹುವಚನ ಪ್ರಯೋಗವಿರುವುದು. ಇದು ಸರಿಯಲ್ಲ. ಏಕೆಂದರೆ ಒಬ್ಬನನ್ನು ಬೋಧಿಸುವಾಗ ಬಹುವಚನವನ್ನು ಉಪಯೋಗಿಸುವುದು ಸರಿಯಲ್ಲ ವೆಂದು ಹೇಳಬೇಕಾಗುವುದು. ಆದರೆ "ಅಸ್ಮದೋ ದ್ವಯೋರಿತಿ"

**ಠನುಶಾಸನಂ । ಅಥವಾ ತದೇವ ಸ್ಮರತ್ವಾಯುಷ್ಮಾ್ ।
ಅನಾದಿರನಂತಃಕಾಲಃ । ಅತೀತಾ ವರ್ತ್ತಮಾನಾ ಆಗಾಮಿ-
ನಶ್ಚಾಚಾರ್ಯಾಃ । ಆಚಾರ್ಯಮೂರ್ತ್ತಿಸ್ಥಃ ಪರಃಶಿವ ಉಪದಿಶ-
ತೀತಿ । ತಸ್ಮಾತ್ತದ್ಬಹ್ವೀಮೂರ್ತಿಭೇದಮಾಶ್ರಿತ್ಯ ಸಾಂಬ ಆಚಷ್ಟೇ।
ವ್ಯಾಖ್ಯಾಸ್ಯಾಮ ಇತಿ । ನನು ನೈವಂ ವದಿತುಂ ಯುಕ್ತಂ**

---

ಎಂಬ ಪಾಣಿನಿಕೃತವಾದ ವ್ಯಾಕರಣಸೂತ್ರದಲ್ಲಿ ಉಕ್ತವಾಗಿರುವ ಪ್ರಕಾರ ಏಕವಚನದ ಕರ್ತೃಪದವನ್ನು ಬಹುವಚನದ ಕ್ರಿಯಾಪದವನ್ನು ಇಲ್ಲಿ ಪ್ರಯೋಗಮಾಡಿರುವುದು ಸಾಧುವಾಗಿರುವುದೆಂದು ತಿಳಿಯಬೇಕು. ಅಥವಾ "ಗುರಾವಾತ್ಮನಿ ಬಹುವಚನಂ" ಎಂಬ ನ್ಯಾಯದಿಂದಲೂ ಇಲ್ಲಿ ಕರ್ತೃವಾಚಕವು ಬಹುವಚನವೆಂದು ಪರಿಗಣಿಸಲ್ಪಟ್ಟು ಅದಕ್ಕನುಸಾರ ವಾದ ಬಹುವಚನಕ್ರಿಯಾಪದದ ಪ್ರಯೋಗವು ಯುಕ್ತವಾಗಿರುವು ದೆಂದು ತಿಳಿಯಬೇಕು.

ಕಾಲವು ಆದ್ಯಂತವಿಲ್ಲದ್ದಾಗಿರುವುದು. ಹೀಗಿರುವ ಕಾಲವನ್ನು ಅನುಸರಿಸಿ ಹಿಂದೆ ಗುರುಗಳಾದವರು ಎಷ್ಟೋ ಜನರು ಕಳೆದುಹೋದರು. ಅನೇಕಮಂದಿ ಈಗಲೂ ಇರುವರು. ಇನ್ನು ಮುಂದೆಯೂ ಬಹಳ ಜನ ಗುರುಗಳಾಗುವರು. ಭೂತ ವರ್ತಮಾನ ಭವಿಷ್ಯತ್ಕಾಲಗಳ ಬದಲಾವಣೆಯ ಅನುಸಾರವಾಗಿ ಗುರುಗಳು ಬೇರೆ ಬೇರೆಯಾದರೂ ಗುರುಮೂರ್ತಿಗತನಾದ ಪರಶಿವನು ಮಾತ್ರ ಒಬ್ಬನೇ ಆಗಿ ಉಪದೇಶ ಮಾಡುತ್ತಿರುವನು ಎಂದು ತತ್ತ್ವವಿರುವುದರಿಂದ ಆಯಾಯ ಗುರು ಬಹುತ್ವಪ್ರಯುಕ್ತವಾದ ಬಹುವಚನವು ಗುರುಭೇದವನ್ನನುಸರಿಸಿ

**ವ್ಯಾಖ್ಯಾಸ್ಯಾಮ ಇತಿ। ಯದಾ ಗುರುಂ ಪೃಚ್ಛತಿ ಶಿಷ್ಯಸ್ತದಾ ಸ ವದತಿ ತತೋ ವ್ಯಾಖ್ಯಾಮ ಇತಿ ನಿರ್ದೇಷ್ಟವ್ಯಂ। ನ ನಿರ್ದೇಷ್ಟವ್ಯಂ। ಯತ ಏವಮಭಿಸಂಧತ್ತೇ ಶ್ರುತಿಃ "ನ ಸಹಸ್ಯೈವ ಪೃಚ್ಛಂತಂ ವಿಧೇಯಂ ಬೋಧಯೇತ್। ಅಪಿ**

ಇರುತ್ತದೆ. ಈ ಕಾರಣದಿಂದಲೇ "ಉಪನಿಷದಂ ವ್ಯಾಖ್ಯಾಸ್ಯಾಮಃ" ಎಂದು ಬಹುವಚನಪ್ರಯೋಗವು ಸಾಧುವಾಗಿರುವುದು.

ಶಿಷ್ಯನು ಗುರುವನ್ನು ಪ್ರಶ್ನೆಮಾಡುವಾಗ ಗುರುವು "ವ್ಯಾಖ್ಯಾಸ್ಯಾಮಃ" ಎಂದು ಉತ್ತರವನ್ನು ಹೇಳುವನು. ಆದುದರಿಂದ "ವ್ಯಾಖ್ಯಾಸ್ಯಾಮಃ" ಎಂಬ ಶಬ್ದಪ್ರಯೋಗವು ಇಂತಹ ಸಂದರ್ಭದಲ್ಲಿ ರೂಢಿಯಲ್ಲಿರುವುದರಿಂದ ಆ ಶಬ್ದವು ಏಕವಚನವೇ ಅಥವಾ ಬಹುವಚನವೇ ಎಂದು ವಿಮರ್ಶಿಸಬೇಕಾಗಿಲ್ಲ. ಮತ್ತು "ವ್ಯಾಖ್ಯಾಸ್ಯಾಮಃ" ಎಂದು ನಿರ್ದೇಶಮಾಡಬೇಕೆಂಬ ವಿಧಿಯೂ ಕೂಡ ಇರುವುದೆಂದು ಶ್ರುತಿಯಿಂದ ನಿರ್ಣೀತವಾಗಿರುವುದು. ಆದುದರಿಂದ "ವ್ಯಾಖ್ಯಾಸ್ಯಾಮಃ" ಎಂಬ ಬಹುವಚನಪ್ರಯೋಗವು ಈ ಎಲ್ಲಾ ದೃಷ್ಟಿಗಳಿಂದಲೂ ಸಾಧುವಾಗಿಯೇ ಇರುವುದು.

ಶಿಷ್ಯನು ಗುರುವನ್ನು ಉಪದೇಶಮಾಡಬೇಕೆಂದು ಪ್ರಶ್ನೆಮಾಡುವ ಸಂದರ್ಭದಲ್ಲಿ ಶ್ರುತಿಯು—"ವಿಧೇಯನಾದ ಶಿಷ್ಯನು ಗುರುವನ್ನು ಪ್ರಶ್ನೆಮಾಡಿದಲ್ಲಿ ಗುರುವು ಆ ಕೂಡಲೇ ಅವನಿಗೆ ಉಪದೇಶವನ್ನು ಮಾಡಬಾರದು. ಏಕೆಂದರೆ ಹಿಂದೆ ಉಪದೇಶಮಾಡಿದ ವಿಷಯವನ್ನು ಆ

**ತರ್ಹಿ ಅತೀತ್ಯಾನೇಹಸಂ ತಂ ತಂ ಯಾವತಾಸ್ಯಾರ್ಥಂತೀ ಅವಧ್ರಿಯೇತೇತಿ" । ಸರ್ವಥಾಽಪಿ ಪೃಚ್ಛಂತಂ ಶಿಷ್ಯಂ ನ ತಸ್ಮಿನ್ನಿವಸೇ ಉಪದಿಶೇತ್ ಯತೋಽನದ್ಯತನಭವಿಷ್ಯತಿ ಲೃಟ್ ವಿಹಿತ ಇತಿ । ಸ್ಮೃತೇಶ್ಚ । ಸ್ಮರನ್ತಿ ಹಿ ವಾಸಿಷ್ಠ-ರಾಮಾಯಣೇ ಶುಕಮುಪಸನ್ನಂ ಶಾಸ್ತಿ ಸ್ಮ ಜನಕೋಽ-ತೀತ್ಯಾನೇಹಸಮನೇಕಮಿತಿ । ಅವಗತಾಃ ಶಿಷ್ಯತಾಮವ-**

---

ಶಿಷ್ಯನು ಸರಿಯಾಗಿ ತಿಳಿದುಕೊಂಡನೇ, ಇಲ್ಲವೇ ಅಥವಾ ಶಿಷ್ಯನಿಗೆ ಉಪದೇಶವಿಷಯವನ್ನು ತಿಳಿದು ಧಾರಣೆಮಾಡುವ ಯೋಗ್ಯತೆ ಯಿದೆಯೇ ಇಲ್ಲವೇ ಎಂಬುದನ್ನು ತಿಳಿದು ಅನಂತರ ಉಪದೇಶಮಾಡ ಬೇಕು. ಒಂದುವೇಳೆ ಶಿಷ್ಯನಿಗೆ ಆ ಯೋಗ್ಯತೆ ಇಲ್ಲದಿದ್ದಲ್ಲಿ ಅವನಿಗೆ ಆ ಯೋಗ್ಯತೆ ಉಂಟಾಗುವವರೆಗೂ ಕಾಲನಿರೀಕ್ಷಣೆಮಾಡಿ ಅನಂತರ ಉಪದೇಶಮಾಡಬೇಕು" ಎಂದು ಬೋಧಿಸುವುದು. ಪ್ರಶ್ನೆಯನ್ನು ಕೇಳುವ ಶಿಷ್ಯನಿಗೆ ಯಾವವಿಧದಿಂದಲೂ ಕೂಡ ಆಕ್ಷಣದಲ್ಲಿಯೇ ಉಪದೇಶಮಾಡಬಾರದು. ಇದನ್ನು ಅನುಸರಿಸಿಯೇ ಲೃಟ್ ಪ್ರಯೋ ಗವು ಅನದ್ಯತನಭವಿಷ್ಯತ್ಕಾಲಬೋಧಕವು ಎಂದು ಹೇಳಿರುವುದು. "ವ್ಯಾಖ್ಯಾಸ್ಯಾಮಃ"ಎಂಬುವುದು ಲೃಟ್ ಪ್ರಯೋಗವಾಗಿರುತ್ತದೆ ಎಂದು ಸ್ಮೃತಿಯೂ ಕೂಡ ಬೋಧಿಸುತ್ತಿರುವುದು. ವಾಸಿಷ್ಠರಾಮಾಯಣದಲ್ಲಿ ಶುಕಮುನಿಯು ಉಪದೇಶಕ್ಕಾಗಿ ಜನಕರಾಜನ ಸಮೀಪಕ್ಕೆ ಬಂದು ಪ್ರಾರ್ಥಿಸಿದಾಗ "ಅನೇಕಮನೇಹಸಮತೀತ್ಯ" ಎಂದು ಉಕ್ತವಾಗಿರು ವುದು. ಅನೇಕಂ=ಬಹಳವಾದ, ಅನೇಹಸಂ=ಕಾಲವನ್ನು, ಅತೀತ್ಯ=

# ಸಕಲನಿಗಮಾಗಮಸಾರಪಾರಗಂ ಪರಿಪಕ್ವಭಾವಭರಮಾಚಾರ್ಯಂ ಪ್ರಣಮ್ಯ

ಚ್ಛಿಂದಂತೋ ಧರ್ಮಾಃ । ಕೇ ಪುನಃ ಶಾಸ್ತ್ರೃತಾಮವಚ್ಛಿಂದನ್ತಿ? ತಾನಾಚಷ್ಟೇ ಶ್ರುತಿಃ— "ಸಕಲನಿಗಮಾಗಮಪಾರಗಂ ಪರಿಪಕ್ವಭಾವಭರಂ ಆಚಾರ್ಯ" ಮಿತಿ ।

---

ಕಳೆದನಂತರ ಎಂದು ಈ ವಾಕ್ಯದ ಅಭಿಪ್ರಾಯವು. ಅಷ್ಟಾದಶಪುರಾಣಗಳು, ಮಹಾಭಾರತ, ಬ್ರಹ್ಮಸೂತ್ರ ಮೊದಲಾದ ಗ್ರಂಥಗಳನ್ನು ಬರೆದು, ವೇದಗಳನ್ನು ವಿಭಾಗಮಾಡಿ ಪ್ರಸಿದ್ಧನಾದ ವ್ಯಾಸಮಹರ್ಷಿಯ ಸಾಕ್ಷಾತ್ಪುತ್ರನಾದ ಶುಕನಿಗೂ ಕೂಡ ಬಹಳಕಾಲದವರೆಗೂ ಪರೀಕ್ಷಿಸಿದ ನಂತರ ನಿನಗೆ ಉಪದೇಶಮಾಡುವೆನು ಎಂದು ಜನಕರಾಜನು ಹೇಳಿರುವನು.

ಶಿಷ್ಯನು ಗ್ರಹಣಧಾರಣಪಟುವಾಗಿರಬೇಕು. ವಿಧೇಯನಾಗಿ ತತ್ತ್ವೋಪದೇಶವನ್ನು ಹೊಂದುವುದಕ್ಕಾಗಿ ಗುರೂಪಸತ್ತಿಯನ್ನು ಮಾಡಬೇಕು ಎಂದು ಶಿಷ್ಯನ ಧರ್ಮಗಳು ಉಕ್ತವಾಗಿರುವವು. "ಸಕಲನಿಗಮಾಗಮಪಾರಗಂ ಪರಿಪಕ್ವಭಾವಭರಮಾಚಾರ್ಯಂ" ಎಂಬ ಶ್ರುತಿವಾಕ್ಯವು ಗುರುಲಕ್ಷಣವನ್ನು ಬೋಧಿಸುವುದು. ಎಂದರೆ ಗುರುವಾದವನಿಗೆ ಸಕಲ ವೇದಗಳೂ ಆಗಮಗಳೂ ತಿಳಿದಿರಬೇಕು. ಶಾಸ್ತ್ರಮನನದಿಂದ ಅವನ ಮನಸ್ಸು ಪರಿಪಕ್ವಭಾವವನ್ನು ಹೊಂದಿರಬೇಕು. ಇಂತಹ

ಋಗ್ವೇದಾದ್ಯಾ ನಿಗಮಾಃ । ಕಾಮಿಕಾದ್ಯಾ ಆಗಮಾಃ । ನನು ಸರ್ವಜ್ಞ ಏವೇಯತೋ ಜಾನೀಯಾನ್ನ ಮನುಷ್ಯಃ ಸಾಮಾನ್ಯಃ । ನೇತಿ ಬ್ರೂಮಃ । ಯಃ ಖಲು ದೇವ-ಭಾಜಂ ಗುರುಂ ಭಜತೇ ತಸ್ಯ ಪುರುಷಧೌರೇಯಸ್ಯ ಅಕಥಿತಾರ್ಥಾನಾಮಪಿ ಪ್ರಕಾಶಂ ಯತೋಽವಗಚ್ಛಾಮ

---

ಆಚಾರ್ಯನು ಉಪದೇಶವಾಡಲು ಯೋಗ್ಯನು. ಇಲ್ಲಿ ನಿಗಮಪದ ಪ್ರಯೋಗದಿಂದ ಋಗ್ವೇದ ಮೊದಲಾದ ವೇದಗಳೂ, ಆಗಮಪದದಿಂದ ಕಾಮಿಕವೇ ಮೊದಲಾದ ಆಗಮಗಳೂ ಗುರುವಿಗೆ ತಿಳಿದಿರಬೇಕೆಂದು ಬೋಧಿತವಾಗುವುದು. ಸಾಮಾನ್ಯ ಮನುಷ್ಯನಿಗೆ ಎಲ್ಲವನ್ನೂ ತಿಳಿಯುವ ಸಾಮರ್ಥ್ಯವಿರುವುದಿಲ್ಲ. ಸರ್ವಜ್ಞನಾದವನು ಮಾತ್ರವೇ ಎಲ್ಲವನ್ನೂ ತಿಳಿಯಬಲ್ಲನು ಎಂದು ಹೇಳಬಹುದು. ಆದರೆ ದೇವತಾನುಗ್ರಹವನ್ನು ಸಂಪಾದಿಸಿರುವ ಗುರುವನ್ನು ಸೇವಿಸಿ ಅವನ ಅನುಗ್ರಹವನ್ನು ಪಡೆದ ಉತ್ತಮನಾದ ಮನುಷ್ಯನಿಗೆ ತಾನು ಉಪದೇಶದಿಂದ ಕಲಿತ ವಿಷಯಗಳಿಗಿಂತಲೂ ಅತಿಶಯವಾಗಿ ತತ್ತ್ವಗಳು ಚೆನ್ನಾಗಿ ಸ್ಫುರಿಸುತ್ತವೆ ಎಂದು ಶಿಷ್ಟಸಮ್ಮತಿಯು ಇರುವುದು. "ಯಸ್ಯ ದೇವೇ ಪರಾಭಕ್ತಿಃ" ಎಂಬ ವಚನವು—ದೇವತೆಗಳಲ್ಲಿಯೂ ಗುರುವಿನಲ್ಲಿಯೂ ನಿಶ್ಚಲವಾದ ಭಕ್ತಿಯುಳ್ಳ ಮಹಾತ್ಮನಿಗೆ ತತ್ತ್ವಗಳು ಉಪದೇಶಹೊಂದಿರುವುದಕ್ಕಿಂತಲೂ ಅಧಿಕವಾಗಿ ಸ್ಫುರಿಸುವವು ಎಂದು ಬೋಧಿಸುವುದು. ಆದುದರಿಂದ ಸರ್ವಜ್ಞನು ಮಾತ್ರ ತತ್ತ್ವವೆಲ್ಲವನ್ನೂ ತಿಳಿದಿರುವನು. ಇತರರಿಗೆ ಆ ಸಾಮರ್ಥ್ಯವಿಲ್ಲ ಎಂಬ ನಿಯಮವಿರಬೇಕಾಗಿಲ್ಲ.

ಇತಿ । ಯತ ಆಹ—"ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇಽಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನ" ಇತಿ । ಅತ್ರಾತ್ಮಶಬ್ದವಾಚ್ಯಸ್ಯ ಮನಸೋ ಮಹತ್ತ್ವಂ ಪರಿಪಕ್ವಭಾವಭರತ್ವಂ । ದಂಭಾಹಂಕಾರಾದಿಮಲಾನಾಂ ಗಂಧೇನಾಪ್ಯನಾಘ್ರಾತಚಿತ್ತವೃತ್ತಿಸಮುದಾಯ ಇತಿ ತದರ್ಥಃ । ಇಹ ಚ ಪರಿಪಕ್ವಭಾವಭರಃ ಕೀರ್ತ್ಯಮಾನಃ ತಾನಪ್ಯರ್ಥಾನ್ ಗಮಯತಿ ಯೈರ್ವಿನಾಸಾವನುಪಪನ್ನಃ ಸ್ಯಾತ್ । ಕೇ ಪುನಸ್ತೇಽರ್ಥಾಃ? ತಾನಾಹುಃ ಶ್ರುತಿಮರ್ಮವಿದಃ—" ಸದ್ವಿಪ್ರಕುಲೀನೋ ಭಾವಶುದ್ಧಃ

---

"ಯಸ್ಯ ದೇವೇ ಪರಾ ಭಕ್ತಿಃ" ಎಂಬ ಶ್ಲೋಕದಲ್ಲಿ "ಮಹಾತ್ಮನಃ" ಎಂಬ ಶಬ್ದವು ಇರುವುದು. ಇಲ್ಲಿ ಆತ್ಮಶಬ್ದಕ್ಕೆ ಮನಸ್ಸು ಎಂಬರ್ಥವನ್ನು ಹೇಳಬೇಕು. ಈ ಮನಸ್ಸಿನ ಮಹತ್ವವು ಪರಿಪಕ್ವಭಾವಭರತ್ವದಿಂದ ಉಂಟಾಗಿರುವುದು. ಮನಸ್ಸಿಗೆ ದಂಭ, ಅಹಂಕಾರ ಮೊದಲಾದ ದೋಷಗಳು ಸ್ವಲ್ಪವೂ ಇಲ್ಲದಿರುವಾಗ ಪರಿಪಕ್ವಭಾವಭರತ್ವವು ಉಂಟಾಗುವುದು ಎಂದರೆ ದಂಭಾಹಂಕಾರವೇ ಮೊದಲಾದ ಚಿತ್ತದೋಷಗಳಿಲ್ಲದ ಪರಿಶುದ್ಧವಾದ ಭಾವವನ್ನು ಹೊಂದಿರುವನು ಎಂದು ತಿಳಿಯಬೇಕು. ದಂಭಾಹಂಕಾರವೇ ಮೊದಲಾದ ಚಿತ್ತದೋಷಗಳು ನಾಶವಾಗಿ ಪರಿಶುದ್ಧವಾದ ಮನಸ್ಸನ್ನು ಹೊಂದಿರುವ ಸ್ಥಿತಿಯು ಉಂಟಾಗಲು ಸತ್ಕುಲಪ್ರಸೂತಿಯು ಅವಶ್ಯಕವಾಗಿ ಇರಬೇಕು. ಇಂತಹ ಸತ್ಕುಲಪ್ರಸೂತಿಯೇ ಮೊದಲಾದ ಧರ್ಮಗಳಿರುವಾಗ ಭಾವಶುದ್ಧಿಯು ಉಂಟಾಗುವುದೆಂದು

ಸ್ಯಾತ್ ಯತಃ ಕುಲೀನೈರ್ಜನಕಾದಿಭಿರ್ವೈದಿಕೈಃ ಕರ್ಮಭಿಃ ಸಂಸ್ಕ್ರಿಯೇತ, ಯೇನ ವೇದಾ ವಾ ಆಗಮಾ ವಾ ಸಾಧ್ವ-ಧೀಯೀರನ್ ತಸನು ತತ್ತ್ವಮನ್ವೇಷಾಮನುಬುಧ್ಯೇತ, ವಾರ್ಣೋ ಪಾಶ್ರಮಿಣೋ ವಾಚಾರೋಽವಿಕಲಮನುಷ್ಠೀ-ಯೇತ । ಯನ್ನಿಬಂಧನಮೇವೈಷ ದಕ್ಷಸ್ತಪಸ್ವೀ ಆಸ್ತಿಕ-ಮೂರ್ಧನ್ಯಃ ಪ್ರಥೇತ । ಯಥಶ್ಚಾಸ್ಯ ಪುರುಷಧೌರೇಯಸ್ಯ

ಶ್ರುತಿತತ್ವಗಳನ್ನು ತಿಳಿದವರು ಹೇಳುವರು. "ಪರಿಪಕ್ವಭಾವಭರಃ ಎಂಬ ವಿಶೇಷಣವು ಉಪಲಕ್ಷಣವಾಗಿ ಧರ್ಮಾಂತರಸ್ಥಿತಿಯು ಆವಶ್ಯಕ ವೆಂದು ಬೋಧಿಸುವುದು. ಉತ್ತಮವಾದ ವಂಶದಲ್ಲಿ ಹುಟ್ಟಿದವನಿಗೆ ಭಾವಶುದ್ಧಿಯು ಉಂಟಾಗುವುದು. ಭಾವಶುದ್ಧಿಯು ಉಂಟಾಗಲು ಅಂತಹ ಸತ್ಕುಲಪ್ರಸೂತನಿಗೆ ಆವನ ತಂದೆಯೇ ಮೊದಲಾದವರು ವೈದಿಕಕರ್ಮವಿಧಿಗಳಿಂದ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡು ವರು. ವೇದಗಳನ್ನೂ ಆಗಮಗಳನ್ನೂ ಹೇಳಿಕೊಟ್ಟು ಕಲಿಸುವರು. ವೇದಶಾಸ್ತ್ರಾಧ್ಯಯನದಿಂದ ತತ್ತ್ವಗಳು ಚನ್ನಾಗಿ ತಿಳಿಯುವವು. ಸತ್ಕುಲ ದಲ್ಲಿ ಹುಟ್ಟಿ ಜಾತಕರ್ಮಾದಿ ಸಂಸ್ಕಾರಗಳನ್ನು ಹೊಂದಿ, ವೇದಶಾಸ್ತ್ರ ಗಳನ್ನು ಅಧ್ಯಯನಮಾಡಿ ತತ್ತ್ವಗಳನ್ನು ತಿಳಿದುಕೊಂಡವನು ತನ್ನ ವರ್ಣಾಶ್ರಮಧರ್ಮಗಳನ್ನು ಯಾವವಿಧವಾದ ನ್ಯೂನತೆಯೂ ಇಲ್ಲದಂತೆ ಆಚರಿಸುವುದರಿಂದ ದಕ್ಷನೂ, ತಪಸ್ವಿಯೂ, ಆಸ್ತಿಕರಲ್ಲಿ ಶ್ರೇಷ್ಠನೂ ಎಂದು ಪ್ರಸಿದ್ಧಿಯನ್ನು ಹೊಂದುವನು. ಇಂತಹ ಪುರುಷಶ್ರೇಷ್ಠನ ಮನಸ್ಸಿನಲ್ಲಿರುವ ಅಭಿಪ್ರಾಯಗಳೆಲ್ಲವೂ ಪರಿಶುದ್ಧವಾಗಿರುವವು ಎಂಬ

ಛಾತ್ರಃ ಪರಿಪೃಚ್ಛತಿ। ಭಗವನ್ ಮೇ ಮಹಾ-
ಶಿಲ್ಪತತ್ತ್ವರಹಸ್ಯಂ ಬ್ರೂಹೀತಿ । ತಗ್ಂ

---

ಸರ್ವೇ ಮಾನಸಭಾವಾಃ ಪರಿಪಚ್ಯೇರನ್ನಿತಿ" । ಆಚಾರ್ಯಮಿತಿ
ಕಃ ಪದಾರ್ಥಃ? ಶಾಸ್ತ್ರಾರ್ಥಂ ಸಂಗೃಹ್ಯ ಸುಗಮತಯಾ
ಬೋಧಕ ಆಚಾರದೇಶಿಕ ಆಚರಿತಾ ಚ ತತ್ಪದಾರ್ಥಃ ।
ನಾಪೃಷ್ಟಃ ಕಸ್ಯಚಿದ್ಬ್ರೂಯಾದಿತಿ ನಿಷೇಧಪರಿಪಾಲನಾಯ
ಪ್ರಶ್ನಪ್ರಕಾರಂ ದರ್ಶಯತಿ ಭಗವನ್ನಿತ್ಯಾದಿನಾ-"ಉತ್ಪತ್ತಿಂ

---

ಈ ಅರ್ಥವೆಲ್ಲವೂ "ಪರಿಪಕ್ವಭಾವಭರಃ" ಎಂಬ ವಿಶೇಷಣದಿಂದ ಬೋಧಿತವಾಗಿರುತ್ತದೆ. ಶಾಸ್ತ್ರಾರ್ಥವನ್ನು ಸಂಗ್ರಹಮಾಡಿ ಶಿಷ್ಯನಿಗೆ ಚೆನ್ನಾಗಿ ತಿಳಿಯುವಂತೆ ಬೋಧಿಸುವವನು ಮತ್ತು ತಾನೂ ಕೂಡ ಶಾಸ್ತ್ರನಿಯಮಗಳನ್ನು ಆಚರಿಸುವವನು ಆಚಾರ್ಯನೆನಿಸುವನು.

"ನಾಪೃಷ್ಟಃ ಕಸ್ಯಚಿದ್ಬ್ರೂಯಾತ್" ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಲ್ಲದೆ, ತತ್ತ್ವೋಪದೇಶವನ್ನು ಮಾಡಬೇಕೆಂದು ಗುರುವನ್ನು ಪ್ರಶ್ನೆಯನ್ನೂ ಮಾಡದಿರುವ ಯಾವ ಮನುಷ್ಯನಿಗೂ ತತ್ತ್ವವನ್ನು ಉಪದೇಶಮಾಡಬಾರದು ಎಂದು ಶಾಸ್ತ್ರವು ಬೋಧಿಸುವುದು. ಇದನ್ನು ಅನುಸರಿಸಿಯೇ "ಭಗವನ್ ಮೇ ಮಹಾಶಿಲ್ಪತತ್ತ್ವರಹಸ್ಯಂ ಬ್ರೂಹಿ" ಎಂಬ ಪ್ರಶ್ನೆಯು ಉಕ್ತವಾಗಿರುತ್ತದೆ. ಶಿಷ್ಯನು ಈರೀತಿ ಪ್ರಶ್ನೆಮಾಡಿದಮೇಲೆ ಗುರುವು ಅವನಿಗೆ ತತ್ತ್ವೋಪದೇಶ

**ಚ ವಿನಾಶಂ ಚ ಭೂತಾನಾಮಾಗತಿಂ ಗತಿಂ। ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ” ಇತಿ ವಚನಪ್ರಮಿತಃ ಭಗವತ್ಪದಾರ್ಥಃ । ಶಿಲ್ಪವಿದ್ಯಾರಹಸ್ಯ-ತತ್ತ್ವಮಿತಿ। ನಿರ್ದಿಷ್ಟಾರ್ಥಕಂ ಶಿಲ್ಪಂ। ತತ ಏವಾಸ್ಯ ಮಹತ್ತ್ವಂ। ತತ್ತತ್ತ್ವಂ ಚ ಆಪಾತತೋ ಭಾಸಮಾನಾ-ರ್ಥಾನಪೇಕ್ಷ್ಯ ಸಾರಾಂಶರೂಪಃ ತಸ್ಯ ರಹಸ್ಯಂ । ಕಂ ಪುನರರ್ಥಮೇಷ ರಹಸ್ಯಶಬ್ದೋಽಭಿಧತ್ತೇ? ಶಾಸ್ತ್ರೇಽ-**

---

ವನ್ನು ಮಾಡಬೇಕೆಂದು ಅಭಿಪ್ರಾಯವು. ಪ್ರಾಣಿಗಳ ಜನನಮರಣ ಗಳನ್ನೂ ಗಮನಾಗಮನಗಳನ್ನೂ ವಿದ್ಯಾವಿದ್ಯಗಳ ಸ್ವರೂಪವನ್ನೂ ಜ್ಞಾನಾಜ್ಞಾನಗಳನ್ನೂ ತಿಳಿಯುವವನು ಭಗವಂತನೆನಿಸುವವನು. ಆದುದರಿಂದ ಇಲ್ಲಿ ಗುರುವನ್ನು ಶಿಷ್ಯನು ಭಗವನ್ ಎಂದು ಸಂಬೋಧನೆ ಮಾಡಿರುವನು. “ಮಹಾಶಿಲ್ಪತತ್ತ್ವರಹಸ್ಯಂ” ಎಂಬ ಪದದಲ್ಲಿರುವ ಶಿಲ್ಪಪದದ ಅರ್ಥವು ಅತಿಶಯವಾಗಿರುವುದರಿಂದಲೇ ಮಹಾಶಿಲ್ಪವೆನಿ ಸಿರುವುದು. ಈ ಶಿಲ್ಪಶಾಸ್ತ್ರಗಳಲ್ಲಿ ಬೋಧಿಸಿರುವ ವಿಷಯಗಳನ್ನು ಚೆನ್ನಾಗಿ ವಿಮರ್ಶೆಮಾಡಿ ತಿಳಿದುಕೊಳ್ಳದೆ ಮೇಲೆ ತೋರುವ ಅರ್ಥ ವನ್ನೇ ಗ್ರಹಿಸಿದಲ್ಲಿ ಅದು ಸಾರಾಂಶವಾಗುವುದಿಲ್ಲ. ಆದುದರಿಂದ ಶಾಸ್ತ್ರ ಗತವಿಷಯಗಳನ್ನು ಚೆನ್ನಾಗಿ ವಿಮರ್ಶೆಮಾಡಿ ಅದರ ಮುಖ್ಯಾರ್ಥ ವನ್ನೂ ಉದ್ದೇಶವನ್ನೂ ತಿಳಿದುಕೊಳ್ಳುವುದೇ ಸಾರಾಂಶವೆನಿಸುವುದು. ಇದರ ರಹಸ್ಯವು ಕೇವಲ ಶಾಸ್ತ್ರಪ್ರವಚನದಿಂದ ತಿಳಿಯಲಶಕ್ಯವು. ಗುರು ಮುಖದಿಂದ ಉಪದೇಶರೂಪವಾಗಿ ಬೋಧಿಸಲ್ಪಡುವುದರಿಂದ ಮಾತ್ರವೇ

# ಸಹೋವಾಚ । ಅಣೋರಣೀಯೋ

ಶಕ್ಯನಿಬಂಧನಃ ಗುರುಮುಖೈಕಸಮಧಿಗಮ್ಯಕ್ಕ ಯೋಽರ್ಥ-
ಸ್ತಮಿತಿ ಬ್ರೂಮಃ । ಅತ ಏವ ಬ್ರೂಹೀತ್ಯಾಚಷ್ಟೇ ನ
ಲಿಖೇತಿ । ತಂ ಹೋವಾಚೇತಿ ಶ್ರುತಿವಚನಂ ಗುರೋಃ
ಸಂತೋಷಪ್ರಕಟನಾಯ, ಯನ್ನಿಬಂಧನಂ ಹಿ ವಿಶಿಷ್ಟ-
ಮರ್ಥಮುಪದಿಶೇತ್ । ನನ್ವಾಚಾರ್ಯಸಕಾಶಂ ಹಿತಕಾರಿಣಃ
ಪಿತರೋ ಮಾಣವಕಾನ್ನೀತ್ವಾರ್ಥಯಂತೇ—“ಇಮಾ-
ನ್ಮಾಣವಕಾನ್ ಶಿಷ್ಯಾನನುಶಿಷ್ಟೇತಿ” ತಂ ತಮರ್ಥಂ ಗ್ರಾಹ-

ಶಿಲ್ಪರಹಸ್ಯವನ್ನು ತಿಳಿಯಲು ಶಕ್ಯವಾಗುವುದು. ಆದುದರಿಂದ ಶಿಲ್ಪ ರಹಸ್ಯವನ್ನು ಬರೆಯಬೇಕೆಂದು ಕೇಳದೆ ಉಪದೇಶಮಾಡು ಎಂದು ಹೇಳಿರುತ್ತದೆ. “ತಗ್ಂಹೋವಾಚ” ಎಂಬುವುದು ಗುರುವು ಹೇಳುವ ಪ್ರತಿವಚನವು. ಇದರಿಂದ ಗುರುವಿನ ಸಂತೋಷವು ಪ್ರಕಟವಾಗುತ್ತದೆ. ಈ ಪ್ರಕಾರವಾದ ಸಂತೋಷದಿಂದ ಇರುವ ಗುರುವು ಶಿಷ್ಯನಿಗೆ ಶಿಲ್ಪರಹಸ್ಯವನ್ನು ಚೆನ್ನಾಗಿ ಉಪದೇಶಮಾಡುವನೆಂದು ತಿಳಿಯಬೇಕು.

ಲೋಕದಲ್ಲಿ ಪುತ್ರವಂತರಾದವರು ತಮ್ಮ ಬಾಲಕರನ್ನು ಗುರುವಿನ ಸಮೀಪಕ್ಕೆ ಕರೆದುಕೊಂಡು ಬಂದು “ಇವರನ್ನು ಶಿಷ್ಯರನ್ನಾಗಿ ಸ್ವೀಕರಿಸಿ” ಎಂದು ಗುರುಗಳನ್ನು ಪ್ರಾರ್ಥಿಸುವರು ಮತ್ತು ಸಂದರ್ಭೋ-

**ಯಂತಃ । ತನ್ನಾರ್ಥಂ ಆಚಾರ್ಯತಾಮುಪಚ್ಛಿಂದಂತೋ ನಿರ್ದಿಶ್ಯಮಾನಸ್ಯ ಪರಿಪಕ್ವಭಾವಭರಸ್ಯ । ಅರ್ಥ ಇತಿ ಬ್ರೂಮಃ ಅನ್ಯಾಭಿಸಂಧೇಃ । ಕೋಽಸಾವಭಿಸಂಧಿಃ? ತಮನುಶಿಷ್ಮಃ—ನಾಸೌ ಶಿಷ್ಯಃ ಪಿತೃನೀತಃ ಅಪಿ ತರ್ಹಿ ಸ್ವಯಮುಪಸನ್ನಃ । ಕಿಂ ಪುನರುಪಸತ್ತಿಕಾರಣಂ? ಪರಿ-ಪಕ್ವಭಾವಭರವಿತ್ತಿಃ ಇತಿ । ನನ್ವೀದೃಶೀ ವಿತ್ತಿಃ ಕತಮಸ್ಮಾ ಅರ್ಥಾಯಾವಕಲ್ಪತೇ? ನಾಯಂ ಸಾಧಾರಣಃ ಶಿಷ್ಯಃ ಅಪಿ**

---

ಚಿತವಾದ ಸಂಭಾಷಣಾದಿಗಳಿಂದ ತಮ್ಮ ಅಭಿಪ್ರಾಯಗಳನ್ನು ಪ್ರಕಟವಾಗಿ ತಿಳಿಸುವರು. ಮನಃಪರಿಪಕ್ವಭಾವವನ್ನು ಹೊಂದಿ ಗುರುವೆಂದು ಕರೆಯಲ್ಪಡಲು ಅರ್ಹರಾದ ಪುರುಷಶ್ರೇಷ್ಠರಿಗೆ ಈ ವಿಧವಾದ ಪ್ರಾರ್ಥನೆಯಿಂದ ಶಿಷ್ಯರನ್ನು ಪರಿಗ್ರಹಿಸುವುದು ಫಲಕಾರಿಯಲ್ಲ. ಶಿಷ್ಯನಾಗುವವನು ತನ್ನ ತಂದೆಯೇ ಮೊದಲಾದವರಿಂದ ಆಚಾರ್ಯನ ಸಮೀಪಕ್ಕೆ ಕರೆದುಕೊಂಡುಬಂದಲ್ಲಿ ಅಂತಹ ಶಿಷ್ಯನು ಗುರುವಿನಿಂದ ಪ್ರಯೋಜನವನ್ನು ಹೊಂದಲಾರನು. ತತ್ತ್ವೋಪದೇಶದಲ್ಲಿ ಮನಸ್ಸು ಹುಟ್ಟಿ ತಾನಾಗಿಯೇ ಗುರುವಿನ ಸಮೀಪವನ್ನು ಹೊಂದಿದವನಿಗೆ ಶಿಷ್ಯನಾಗುವುದರಲ್ಲಿ ಅರ್ಹತೆಯಿರುವುದು. ತಾನಾಗಿ ಗುರೂಪಸತ್ತಿಯನ್ನು ಹೊಂದಿದವನಿಗೆ ತತ್ತ್ವವನ್ನೂ ರಹಸ್ಯವನ್ನೂ ತಿಳಿದುಕೊಳ್ಳಲು ಅರ್ಹತೆಯೂ ಅದಕ್ಕನುಸಾರವಾದ ಮನಸ್ಸಿನ ಪರಿಶುದ್ಧತೆಯೂ ಇರುತ್ತದೆ. ಹೀಗಿರುವ ಮನಸ್ಸಿನ ಪರಿಶುದ್ಧತೆಯನ್ನು ತಿಳಿದು ಗುರುವು ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬೇಕು. ಮತ್ತು ಈ ಶಿಷ್ಯನು ಸಾಧಾರಣ ಶಿಷ್ಯನಲ್ಲವೆಂದೂ

**ತು ವಿವೇಚನಶಕ್ತಿಮಾನಿತಿ ವೇದನೀಯಮಿತ್ಯೇವಂ ಜಾ-ತೀಯಕಾಯಾರ್ಥಾಯೇತಿ ಬ್ರೂಮಃ। ಸ್ಫುಟಿತಂ ಚೇದಂ ಛಾತ್ರಶಬ್ದೇನ ಶಿಷ್ಯಂ ನಿರ್ದಿಶಂತ್ಯಾಃ ಶ್ರುತೇಃ। ಛಾದಾನಾದ್ಧಿ ಛಾತ್ರಃ ಸ್ಯಾತ್। ಕಿಂ ತಚ್ಛಾದನೀಯಂ? ದೋಷಜಾಲಂ। ನ ಚಾವಿವಿಂಚತೋ ದೋಷಸಂವಿದ್ವಾ ಗುಣಸಂವಿದ್ವಾ**

---

ಮನಶ್ಶುದ್ಧಿಯನ್ನು ಹೊಂದಿ ತತ್ತ್ವರಹಸ್ಯಗಳನ್ನು ಚೆನ್ನಾಗಿ ವಿವೇಚನೆ ಮಾಡುವ ಶಕ್ತಿಯು ಈ ಶಿಷ್ಯನಿಗಿರುವುದೆಂದೂ ಗುರುವು ತಿಳಿದು ಅದರಂತೆ ಅವನಿಗೆ ತತ್ತ್ವೋಪದೇಶಮಾಡಬೇಕು.

ಇಲ್ಲಿ ಶ್ರುತಿಯು ಶಿಷ್ಯನನ್ನು ಛಾತ್ರನೆಂದು ನಿರ್ದೇಶಮಾಡಿರುವುದರಿಂದ ಈ ಅಭಿಪ್ರಾಯವು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಛಾದನೆಯುಳ್ಳವನು ಛಾತ್ರನೆನಿಸುವನು. ಛಾದನೆಯೆಂದರೆ ಮುಚ್ಚಲ್ಪಟ್ಟಿರುವುದು, ಮರೆಯಾಗಿರುವುದು ಎಂದರ್ಥವು. ಮುಚ್ಚಲ್ಪಟ್ಟಿರುವದೇನು ಎಂದರೆ ದೋಷಸಮೂಹವು ಎಂದರೆ ದೋಷಗಳಿಂದ ದೂರವಾಗಿರುವವನು ದೋಷರಹಿತನು ಎಂದಭಿಪ್ರಾಯವು. ಗುಣಜ್ಞಾನವಾಗಲಿ, ದೋಷಜ್ಞಾನವಾಗಲಿ, ಗುಣದೋಷಗಳ ವಿಮರ್ಶೆಯಿಂದ ಉಂಟಾಗುವುದು. ಗುಣದೋಷಗಳ ವಿವೇಚನೆಯನ್ನು ಮಾಡುವ ಶಕ್ತಿಯುಳ್ಳವನು, ದೋಷವನ್ನು ತ್ಯಾಗಮಾಡಿ ಗುಣವನ್ನು ಗ್ರಹಿಸುವನು. ಈ ಗುಣದೋಷಗಳ ಹೇಯೋಪಾದೇಯಪ್ರಕಾರವಾದ ಜ್ಞಾನವನ್ನು ಹೊಂದಿರುವವನು ದೋಷವನ್ನು ಛಾದನೆಮಾಡುವನು. ಎಂದರೆ

ಪ್ರಥೀತ, ಅಪ್ರಾರ್ಥಿತೈತತ್ಸಂವಿಚ್ಚ ಪುರುಷೋ ನ ಹೇಯ-
ಚ್ಛಾದನಾಯೋಪಾದೇಯಪ್ರಕಟನಾಯ ವೇಶೀತ, ತದಿಹ
ಛಾದನಮುವಗಮ್ಯಮಾನಂ ಸ್ವವ್ಯಾಪಿಕಾಂ ತದ್ವಯ-
ಸಂವಿದಮುಪಿ ಗಮಯತೀತಿ । ತತಶ್ಚ ಸಿದ್ಧಂ "ಈದೃಶೀ
ಸಂವಿದಪಿ ಶಿಷ್ಯತಾಮುವಚ್ಛಿನತ್ತೀತಿ" । ನ ಚೈಷಾ-
ಸಂವಿದಶುದ್ಧಭಾವಸ್ಯೋದಿಯಾತ್, ನ ಚಾತೀತ್ಯ
ಸಂಸ್ಕೃತಿಂ ವೈದಿಕೀಂ ಭಾವಾಃ ಶುಧ್ಯನ್ತಿ । ತದನಯಾ
ಪ್ರಣಾಲ್ಯಾ ಏವಂಜಾತೀಯಕಾ ಅಪ್ಯರ್ಥಾಃ ಶಿಷ್ಯತಾಮು-

---

ದೋಷಗಳನ್ನು ತ್ಯಜಿಸುವನು. ಆದುದರಿಂದ ಹೇಯುಪಾದೇಯುವೆಂಬ ಎರಡು ವಿಧವಾದ ಜ್ಞಾನವು ಶಿಷ್ಯನಾದವನಿಗೆ ಮುಖ್ಯವಾಗಿ ಇರಬೇಕು ಎಂದು ಸಿದ್ಧವಾಯಿತು. ಈ ಪ್ರಕಾರವಾಗಿ ಗುಣದೋಷ ಜ್ಞಾನವನ್ನು ಹೊಂದಿ ಅವುಗಳಲ್ಲಿ ಹೇಯೋಪಾದೇಯ ಪ್ರಕಟನೆಯನ್ನು ವಿವೇಚನೆ ಯಿಂದ ಆಚರಿಸುವ ಜ್ಞಾನವು (ಸಾಮರ್ಥ್ಯವು) ಅಪರಿಶುದ್ಧವಾದ ಮನಸ್ಸಿರುವವರಿಗೆ ಉಂಟಾಗುವುದಿಲ್ಲ. ಮನಸ್ಸಿನ ಪರಿಶುದ್ಧಭಾವವು ಉಂಟಾಗಲು ವೈದಿಕವಾದ ಸಂಸ್ಕಾರವು ಆವಶ್ಯಕವು ವೈದಿಕ ಸಂಸ್ಕಾರ ದಿಂದ ಸಂಸ್ಕೃತನಾದವನಿಗೆ ಮನಸ್ಸಿನ ಪರಿಶುದ್ಧತೆಯು ಉಂಟಾಗುವುದು. ಈ ಕ್ರಮವು ಶಿಷ್ಯರಾಗುವವರೆಲ್ಲರಿಗೂ ತಪ್ಪದೆ ಇರಬೇಕು ಎಂದು ಬೋಧಿಸುವುದೇ ಈ ಉಪನಿಷತ್ತಿನ ರಹಸ್ಯವಾದ ತಾತ್ಪರ್ಯವು.

ಈ ಉಪನಿಷತ್ತನ್ನು ಯಾಜುಷಾಥರ್ವಣ ಮಹಾಶಿಲ್ಪೋಪ ನಿಷತ್ತೆಂಬ ಹೆಸರಿನಿಂದ ನಿರ್ದೇಶ ಮಾಡಿರುತ್ತದೆ. ಯಜುರ್ವೇದಕ್ಕೆ

**ವಚ್ಛಿಂದಂತು ಇತಿ ಬೋಧನೇ ವಿಶೇಷತೋ ನಿರ್ದಿಶನ್ತ್ಯಾ ಉಪನಿಷದೋ ಹೃದಯಂ । ನನು "ಯಾಜುಷಾಥರ್ವಣ-ಶಿಲ್ಪವಿದ್ಯಾರಹಸ್ಯೋಪನಿಷತ್" ಇತಿ ಶೀರ್ಷನಿರ್ದೇಶೋಽ-ಸಂಬದ್ಧಃ । ಕಿಂ ಕಾರಣಂ? ಯದಿ ಯಾಜುಷೀ ನ ತರ್ಹಿ**

---

ಸಂಬಂಧಿಸಿರುವುದಾದರೆ ಅಥರ್ವಣವೇದಕ್ಕೆ ಸಂಬಂಧಪಟ್ಟಿರುವುದಿಲ್ಲ. ಅಥರ್ವಣವೇದಕ್ಕೆ ಸಂಬಂಧಿಸಿದ್ದಾದರೆ ಯಜುರ್ವೇದಕ್ಕೆ ಸಂಬಂಧಿಸಿರುವುದಿಲ್ಲ. ಯಾವ ಉಪನಿಷತ್ತಾದರೂ ಅದು ಎರಡು ವೇದಗಳಲ್ಲಿಯೂ ಇರುವುದಿಲ್ಲ. ಆದುದರಿಂದ ಇದನ್ನು ಅಸಂಬದ್ಧವೆಂದು ಹೇಳಬೇಕಾಗುವುದು. ಈ ಆಕ್ಷೇಪಣೆಗೆ ಸಮಾಧಾನವಿದು—ಈ ಉಪನಿಷತ್ಪ್ರತಿಪಾದ್ಯವಾದ ವಿಷಯವು ಯಜುರ್ವೇದದಲ್ಲಿ ಹೇಳಿರುವ ತತ್ತ್ವರಹಸ್ಯವಾಗಿರುವುದರಿಂದ ಯಾಜುಷತತ್ತ್ವರಹಸ್ಯೋಪನಿಷತ್ ಎಂಬ ನಾಮನಿರ್ದೇಶವು ಪ್ರತಿಪಾದ್ಯಾನುಸಾರವಾಗಿರುವುದು. ಪ್ರತಿಪಾದ್ಯವಾದ ಪ್ರಮೇಯವು ಯಜುರ್ವೇದತತ್ತ್ವರಹಸ್ಯಗಳೇ ಆದರೂ ಅವು ಅಥರ್ವಣಕ್ರಿಯಾಸಂಬಂಧವಾಗಿರುವುದರಿಂದ ಯಜುರ್ವೇದವೆಂಬ ಹೆಸರಿನ ಜತೆಯಲ್ಲಿ ಅಥರ್ವಣಪದವೂ ಸೇರಿರುವುದು. ಈ ಕಾರಣದಿಂದ ಮೇಲೆ ಹೇಳಿರುವ ಅಸಂಬದ್ಧತಾಮೋಷವು ಪರಿಹೃತವಾಗಿರುವುದು.

ಮಹತ್ತಾದ ಶಿಲ್ಪತತ್ತ್ವಗಳ ರಹಸ್ಯಗಳು ತಿಳಿಯಲಶಕ್ಯವಾಗಿರುವುದರಿಂದಲೂ ಅವುಗಳನ್ನು ಈ ಉಪನಿಷತ್ತಿನಲ್ಲಿ ವಿವರಿಸಿರುವುದರಿಂದಲೂ ಇದು ಮಹಾಶಿಲ್ಪತತ್ತ್ವರಹಸ್ಯೋಪನಿಷತ್ತೆಂದು ನಿರ್ದಿಷ್ಟವಾಗಿರುವುದು. ಶಿಲ್ಪದಲ್ಲಿರುವ ಮಹತ್ತ್ವವು ಈ ಗ್ರಂಥದಲ್ಲಿ ಮುಂದೆ

**ಆಥರ್ವಣೀ, ಅಥಾಥರ್ವಣೀ ನ ತರ್ಹಿ ಯಾಜುಷೀತಿ । ನಾಸಂಬದ್ಧಃ । ಕಥಂ ಕೃತ್ವಾ? ಯಾಜುಷತತ್ತ್ವರಹ-ಸ್ಯೋಪನಿಷದಿತಿ ಕೃತ್ವಾ । ತದಿದಮಾಹ ಶ್ರುತಿಃ । "ಮಹಾ-ಶಿಲ್ಪಿತತ್ತ್ವರಹಸ್ಯಂ" ಇತಿ ನ ವೇದಿತುಂ ಶಿಲ್ಪರಹಸ್ಯಂ ಶಕ್ನೋತೀತಿ ಪ್ರವರ್ತಮಾನಾ । ಶಿಲ್ಪೇ ಮಹತ್ತ್ವಂ ತು ಉಪರಿಷ್ಟಾದ್ವಿವೃತಂ ಭವಿಷ್ಯತಿ । ಕೇನ ಚ ರಹಸ್ಯೇನ**

ವಿವರಿಸಲ್ಪಡುವುದು. ಮಹತ್ತ್ವದಿಂದ ಕೂಡಿದ ಶಿಲ್ಪರಹಸ್ಯಗಳನ್ನು ಗುರುವಾದವನು ತಾನಾಗಿ ಬಂದು ಶುಶ್ರೂಷೆ ಮಾಡುತ್ತಿರುವ ಶಿಷ್ಯನಿಗೆ ಬೋಧಿಸಿ ಅವನನ್ನು ಶಿವನ ಹಾಗೆ ಪೂಜ್ಯನನ್ನಾಗಿ ಮಾಡುವನು. ಹೀಗೆ ಶಿವಭಾವಪ್ರಾಪಕವಾದ ಶಿಲ್ಪರಹಸ್ಯಗಳನ್ನು ಬೋಧಿಸುವ ಈ ಉಪನಿಷತ್ತನ್ನು ಯಾಜುಷತತ್ತ್ವರಹಸ್ಯೋಪನಿಷತ್ತೆಂದು ನಾವು ನಿರ್ದೇಶ ಮಾಡಿರುವುದು ಯುಕ್ತವಾಗಿಯೇ ಇರುವುದು.

ಉಪ = ಸಮೀಪೇ, ನಿತರಾಂ ಸೀದತಿ ಎಂದು ಉಪನಿಷದ್ಪದದ ನಿರ್ವಚನವು. ಷದಲ್ ಧಾತುವಿಗೆ ವಿಶರಣ, ಗತಿ ಅವಸಾದನವೆಂಬ ಅರ್ಥಗಳು ಪ್ರಸಿದ್ಧವಾಗಿರುತ್ತವೆ. ಅವುಗಳಲ್ಲಿ ಗತಿ ಎಂಬ ಅರ್ಥವನ್ನು ಮಾತ್ರ ಇಲ್ಲಿ ಸ್ವೀಕರಿಸಬೇಕು. ಗತ್ಯರ್ಥವು ಜ್ಞಾನಾರ್ಥವೆಂದು ಪ್ರಸಿದ್ಧವು. ಭಗವದ್ಗೀತೆಯಲ್ಲಿ "ಕೂಟಸ್ಥೋಽಕ್ಷರ ಉಚ್ಯತೇ" ಎಂದು ಹೇಳಿರುವಂತೆ ಕೂಟಸ್ಥನಾದ ಅಕ್ಷರಬ್ರಹ್ಮನ ಸ್ವರೂಪವನ್ನು ತಿಳಿಸುವ ಜ್ಞಾನ ಜನಕವಾದ ಇದನ್ನು ಉಪನಿಷತ್ತೆಂದು ಕರೆಯುತ್ತಾರೆ. ಪ್ರತ್ಯಕ್ಷಾದಿ ಪ್ರಮಾಣಗಳ ಮೂಲಕ ತತ್ತ್ವಗಳನ್ನು ನಿಶ್ಚಯಮಾಡುವ ತತ್ತ್ವಜ್ಞರು

**ಗುರುಸ್ತಮುಪಸನ್ನಂ ಶುಶ್ರೂಷಣಾದಿನಿರತಂ ಚ ಸಹಸಾ ಶಿಷ್ಯಂ ಶಿವಂ ಗಮಯತೀತಿ ಯುಕ್ತಮುಕ್ತಂ ಯಾಜುಷ-ತತ್ತ್ವರಹಸ್ಯೋಪನಿಷದಿತಿ। ತದಿಹ ಯಾವದುಕ್ತಂ ಭವತಿ "ಉಪಸನ್ನನ್ನಿರತಗಮುಕ" ಮಿತಿ "ತಾವದುಕ್ತಂ ಭವತಿ ಉಪನಿಷದಿತಿ"। ಯತ್ಕಾರಣಮುಪ್ಯಕ್ಷರಸಾಮ್ಯಾನ್ನಿರ್ವಕ್ತ-ವ್ಯಮಿತಿ ಪ್ರಾಮಾಣಿಕಾನಾಮನುಶಾಸನಂ। ಯದೇತದ್ರಹಸ್ಯ-**

---

ಉಪನಿಷತ್ ಶಬ್ದದ ಅರ್ಥವು ಹೀಗೆ ಇರುವುದೆಂದು ವಿವರವಾಗಿ ಹೇಳಿರುವರು. ಈ ಅಭಿಪ್ರಾಯದಿಂದಲೇ ಈ ಭಾಷ್ಯದಲ್ಲಿ "ಉಪಸನ್ನ ನಿರತಗಮುಗಂ ಉಪನಿಷತ್" ಎಂದು ನಿರ್ದೇಶ ಮಾಡಿರುತ್ತದೆ.

ಶಿಲ್ಪತತ್ತ್ವರಹಸ್ಯವೆಂಬುದು ಏಕಾಗ್ರತೆಯಿಲ್ಲದಿರುವ ಮನಸ್ಸಿನಿಂದ ತಿಳಿಯಲಶಕ್ಯವಾಗಿರುತ್ತದೆ. ಗುರುವು ಈ ತತ್ತ್ವರಹಸ್ಯವನ್ನು ಸುಲಭವಾದ ರೀತಿಯಿಂದ ತಿಳಿಯುವುದಕ್ಕೆ ತಕ್ಕಂತೆ ಕಾರಣಸಹಿತವಾದ ಯುಕ್ತಿಗಳನ್ನು ಶಿಷ್ಯನಿಗೆ ಬೋಧಿಸಿ ಚಿತ್ತೈಕಾಗ್ರತೆಯನ್ನುಂಟುಮಾಡುವನು. ಶಿಲ್ಪತತ್ತ್ವರಹಸ್ಯವು ಅಣುವಿಗಿಂತಲೂ ಸೂಕ್ಷ್ಮವಾಗಿರುವುದು, ಮಹತ್ತಿದ ಪ್ರಮಾಣವುಳ್ಳದ್ದಕ್ಕಿಂತಲೂ ಮಹಾಪ್ರಮಾಣವುಳ್ಳದ್ದಾಗಿರುವುದು. ಆದುದರಿಂದ ಇದನ್ನು ಸುಲಭವಾಗಿ ತಿಳಿಯಲಾಗುವುದಿಲ್ಲ. ಆದ್ದರಿಂದ ನೀನು ಚಿತ್ತೈಕಾಗ್ರತೆಯನ್ನು ಹೊಂದಿ ಇದನ್ನು ತಿಳಿದುಕೊಳ್ಳಬೇಕು ಎಂದು ಗುರುವು ಶಿಷ್ಯನಿಗೆ ಬೋಧಿಸುವನು. ಶಿಲ್ಪಶಬ್ದದ ಅರ್ಥವೇನೆಂದರೆ—ಆಯಾಯ ಪದಾರ್ಥಗಳ ವಸ್ತುಸ್ವರೂಪನಿರ್ದೇಶ

ಮಹತೋ ಮಹೀಯೋಽತೋ ನ ವೇದಿ-
ತುಗ್ಂ ಶಿಲ್ಪರಹಸ್ಯಗ್ಂ ಶಕ್ನೋತಿ । ಭವ

---

ಮುಪಕ್ರಾನ್ತಂ ನೇದಮನವಹಿತಮನಸಾಧಿಗಮ್ಯೇತೇತಿ ಸ-
ಹೇತುಕಮವಧಾನಮನುಶಾಸ್ತಿ ಗುರುಃ । "ಅಣೋ-
ರಣೀಯೋ ಮಹತೋ ಮಹೀಯೋಽತೋ ನ ವೇದಿತುಂ
ಶಿಲ್ಪರಹಸ್ಯಂ ಶಕ್ನೋತಿ । ಭವ ತಸ್ಮಾತ್ಸಾವಧಾನ" ಇತಿ ।
ಅಯಮರ್ಥಃ । ಲಕ್ಷಣವಿಧಿಪೂಗಂ ಶಿಲ್ಪಶಬ್ದೋಽಭಿದತ್ತೇ।
ಯಸ್ಯ ಪುನರಿಮೇ ಲಕ್ಷಿತಾ ಅರ್ಥಾಃ ವಿಹಿತಾಶ್ಚ ಸಿಧ್ಯನ್ತಿ ಸ
ಸಮಾಧಿಮಶ್ನುವೀತ । ನ ಚಾನವಹಿತಮನಸ ಇಮೇ

---

ವನ್ನೂ ಆ ವಸ್ತುಗಳ ನಿರ್ಮಾಣಪ್ರಯೋಗ ವ್ಯವಹಾರಗಳಲ್ಲಿ ಆಚರಿಸ
ಬೇಕಾದ ವಿಧಿನಿಯಮಗಳನ್ನು ತಿಳಿಯುವುದೇ ಆಗಿರುವುದು. ಶಿಲ್ಪ
ಶಾಸ್ತ್ರದಲ್ಲಿ ಹೇಳಿರುವಂತೆ ವಸ್ತುಗಳ ಲಕ್ಷಣವನ್ನು ತಿಳಿದಲ್ಲಿ ಆ ವಸ್ತುಗಳ
ಜ್ಞಾನವುಂಟಾಗುವುದು ಮತ್ತು ಆ ವಸ್ತುಗಳ ನಿರ್ಮಾಣ ಪ್ರಯೋಗಾದಿ
ಗಳ ವಿಷಯದಲ್ಲಿ ಶಿಲ್ಪಶಾಸ್ತ್ರದಲ್ಲಿ ಹೇಳಿರುವ ವಿಧಿನಿಯಮಗಳನ್ನು
ಅನುಸರಿಸಿದಲ್ಲಿ ವಸ್ತುಜ್ಞಾನವೂ ಅವುಗಳ ವ್ಯಾವಹಾರಿಕ ಸಂಬಂಧವಾದ
ನಿಯಮಗಳೂ ತಿಳಿಯಲ್ಪಡುವುದರಿಂದ ಇವೆಲ್ಲವೂ ರಹಸ್ಯವೆನ್ನಲ್ಪಡು
ವುದು. ಈ ಶಿಲ್ಪರಹಸ್ಯಗಳನ್ನು ಚಿತ್ತೈಕಾಗ್ರತೆಯಿಲ್ಲದೆ ತಿಳಿಯಲಾಗುವು
ದಿಲ್ಲ. ಆದುದರಿಂದಲೇ ಈ ಶಿಲ್ಪಶಾಸ್ತ್ರರಹಸ್ಯವು ಅಣುವಿಗಿಂತಲೂ

ಸಿದ್ಧೇರ್ಯಯುಃ ಯತೋಽಣೋಃ ಸೂಕ್ಷ್ಮಾತ್ತತ್ತದರ್ಥಾದಪಿ ಸೂಕ್ಷ್ಮತರಮಿದಂ ರಹಸ್ಯಂ ಪರಿಮಾಣತೋ ಮಹತ್ವಾ-ದಪಿ। ಯದ್ಯಪಿ ಸಾಂಖ್ಯಯೋಗಾದಿಶಾಸ್ತ್ರಂ ಮಹತ್ಸಂ-ಮತಂ ತತೋಽಪಿ ಮಹತ್ತರಮಿದಂ । ಸೃಷ್ಟ್ಯಾದಿಪ್ರಲ-ಯಾಂತಾ ಹಿ ಕ್ರಿಯಾಃ ಶಿಲ್ಪಶಾಸ್ತ್ರಾವಸೇಯಾಃ । ತಾಶ್ಚ ಕೋಟಿಕೋಟ್ಯಂಡಜಾಲಂ ವ್ಯಾಪ್ನುವನ್ತಿ। ಅತಃ ಸರ್ವ-

ಸೂಕ್ಷ್ಮಪ್ರಮಾಣವುಳ್ಳದ್ದಾಗಿಯೂ ಮಹತ್ಪ್ರಮಾಣಕ್ಕಿಂತಲೂ ಮಹತ್ತಾಗಿಯೂ ಇರುವುದೆಂದು ಮಹಾತ್ಮರಾದವರ ಅಭಿಪ್ರಾಯವಾಗಿರುವುದು. ಮಹಾತ್ಮರಿಗೆ ಸಮ್ಮತಿಯಾದ ಸಾಂಖ್ಯಯೋಗಶಾಸ್ತ್ರಗಳ ತತ್ತ್ವರಹಸ್ಯಗಳಿಗಿಂತಲೂ ಈ ಶಿಲ್ಪತತ್ತ್ವರಹಸ್ಯವು ಮಹತ್ತರವಾಗಿರುವುದು. ಸೃಷ್ಟಿಪ್ರಾರಂಭದಿಂದ ಪ್ರಳಯಕಾಲದವರೆಗೂ ನಡೆಯುವ ಅಥವಾ ಸಂಭವಿಸುವ ಕಾರ್ಯಗಳೆಲ್ಲವೂ ಶಿಲ್ಪಶಾಸ್ತ್ರವೇದ್ಯವಾಗಿರುವುವು. ಆ ಕ್ರಿಯೆಗಳೆಲ್ಲವೂ ಅನೇಕ ಕೋಟಿ ಸಂಖ್ಯಾತವಾದ ಬ್ರಹ್ಮಾಂಡ ಸಮೂಹಗಳೆಲ್ಲವನ್ನೂ ವ್ಯಾಪಿಸಿರುತ್ತವೆ. ಈ ಕಾರಣದಿಂದಲೇ ಶಿಲ್ಪ ತತ್ತ್ವರಹಸ್ಯವು ಮಹತ್ಪ್ರಮಾಣವುಳ್ಳದ್ದಕ್ಕಿಂತಲೂ ಮಹತ್ತರವಾಗಿರುವುದೆಂದು ಹೇಳಲ್ಪಟ್ಟಿರುವುದು. ಇಂತಹ ರಹಸ್ಯವನ್ನು ಚೆನ್ನಾಗಿ ತಿಳಿದನಂತರ ಈ ಜ್ಞಾನದಿಂದ ಆತ್ಮಸಾಕ್ಷಾತ್ಕಾರೋಪಯೋಗಿಯಾದ ಸಮಾಧಿಯು ಕೂಡ ಉಂಟಾಗುವುದು. ಆದುದರಿಂದ ಈ ಶಿಲ್ಪರಹಸ್ಯ ಜ್ಞಾನವು ಸಮಾಧಿಸಾಧನವೆಂದು ಶಿಲ್ಪಶಾಸ್ತ್ರದ ರಹಸ್ಯಾಭಿಪ್ರಾಯವಾಗಿರುವುದು.

ತಸ್ಮಾತ್ಸಾವಧಾನಃ । ವಾಙ್ಮನೋಗೋಚರಾ-

ಸ್ಯಾನ್ಮಹತೋ ಮಹತ್ತರಮಿದಂ ಶಿಲ್ಪಂ । ತಚ್ಚೈವಂ ಯದಾ ಸಿಧ್ಯತಿ ತದಾ ಸಮಾಧಿಸ್ಸ್ಯಾದಿತಿ ಸಮಾಧಿಸಾಧನಂ ಶಿಲ್ಪಮಿತಿ ರಹಸ್ಯಂ । ಶೀಲ ಸಮಾಧೌ ಇತಿ ಧಾತೋರೌಣಾ-ದಿಕೇ ಸಾಧನಾರ್ಥೇ ಪಪ್ರತ್ಯಯೇ ಅಚೋ ಹ್ರಸ್ವತ್ವೇ ಚ ಶಿಲ್ಪಶಬ್ದನಿಷ್ಪತ್ತೇಃ । ಯೋಽಸೌ ಸಾಂಬಮೂರ್ತಿಃ ಶಿಲ್ಪ-ವೇದಪ್ರಕಟಯಿತಾ ಅನುಸಂಹಿತಃ ಸ ಸ್ವರೂಪತ ಔಪಾ-ಧಿಕತಶ್ಚಾವಗಮಯಿತವ್ಯ ಇತಿ ತದುಭಯಂ ಶಾಸ್ತಿ— ವಾಙ್ಮನೋಗೋಚರಾತೀತಾನನ್ತದಿವ್ಯತೇಜೋಮಯೋ

"ಶೀಲ ಸಮಾಧೌ" ಎಂಬ ಧಾತುವಿನಿಂದ ಶಿಲ್ಪಶಬ್ದನಿಷ್ಪತ್ತಿ ಯುಂಟಾಗಿರುವುದು. ಶೀಲ ಧಾತುವಿಗೆ ಸಾಧನಾರ್ಥದಲ್ಲಿ ಉಣಾಧಿ ಗತವಾದ ಪ ಎಂಬ ಪ್ರತ್ಯಯವು ಬಂದು ಶೀಕಾರಗತವಾದ ದೀರ್ಘ ಸ್ವರವು ಹ್ರಸ್ವವಾಗಿ ಶಿಲ್ಪ ಎಂಬ ಶಬ್ದವು ಸಿದ್ಧವಾಯಿತು. ಸಮಾಧಿ ಸಾಧನವೆಂಬುವುದು "ಶೀಲ್ಯತೇ ಅನೇನೇತಿ ಶಿಲ್ಪಂ" ಎಂಬ ನಿರ್ವಚನ ದಿಂದ ನಿಶ್ಚಿತವಾಗಿರುತ್ತದೆ.

ಶಿಲ್ಪವೇದವನ್ನು ಪ್ರಕಟಮಾಡಿದ ಸಾಂಬಮೂರ್ತಿಯ ಸ್ವರೂಪವು ನಿಜಸ್ವರೂಪಸಹಿತವಾಗಿಯೂ, ಔಪಾಧಿಕವಾಗಿಯೂ ಇರುವುದರಿಂದ ಈ ಎರಡು ವಿಧ ಸ್ವರೂಪಗಳನ್ನು ತಿಳಿಯಬೇಕಾದುದು ಅವಶ್ಯಕವಾಗಿರು ವುದು. ದಿವ್ಯತೇಜೋಮಯನೂ, ನಿತ್ಯನೂ ಎಂದರೆ ನಾಶರಹಿತನೂ

ತೀತಾನನ್ತದಿವ್ಯತೇಜೋಮಯೋ ನಿತ್ಯೋ
ನಿರ್ವಿಕಲ್ಪೋ ನಿರಂಜನೋ ನಿರಾಖ್ಯಾತೋಽತಿ-
ಶುದ್ಧೋ ದೇವ ಏಕಃ ಪರಬ್ರಹ್ಮಾ ವಿರಾಜತೇ।

---

ನಿತ್ಯೋ ನಿರ್ವಿಕಲ್ಪೋ ನಿರಂಜನೋ ನಿರಾಖ್ಯಾತೋಽತಿ-
ಶುದ್ಧೋ ದೇವ ಏಕಃ ಪರಬ್ರಹ್ಮಾ ವಿರಾಜತೇ ಕಶ್ಚಿತ್ ಇತಿ।
ಸ ನಿರಾಕಾರೋಽಪಿ.... ನೈಸರ್ಗಿಕಾ ವರ್ತೇತೇ ಇತಿ ಚ ।
" ನೈನಂ ವಾಚಾ ವಕ್ತುಮಾಪ್ತೋಽತಿನಿಪುಣೋಽಪಿ ನ ವಾ

---

ವಿಕಾರರಹಿತನೂ ತ್ರಿಗುಣಾತೀತನೂ ನಾಮರೂಪವರ್ಜಿತನೂ ಅತಿ
ಶುದ್ಧ ಸ್ವಭಾವವುಳ್ಳವನೂ ಆದ ದೇವನೊಬ್ಬನಿರುವನು. ಇವನು
ಪರಬ್ರಹ್ಮನೆಂದು ಪ್ರಸಿದ್ಧಿಹೊಂದಿ ಪ್ರಕಾಶಿಸುತ್ತಿರುವನು. ಇವನಿಗೆ
ನಿರಾಕಾರ ಸಾಕಾರಗಳೆಂಬ ಎರಡು ವಿಧವಾದ ಸ್ವಭಾವವಿರುವುದು.
ಈ ದೇವನ ಸ್ವರೂಪವು ಹೀಗೆಯೇ ಇರುವುದು ಎಂದು ನಿರ್ಣಯಮಾಡಿ
ಶಬ್ದಗಳಿಂದ ವಿವರಿಸಲು ಯಾರಿಗೂ ಸಾಧ್ಯವಿಲ್ಲ. ಎಂತಹ ಮೇಧಾವಿ
ಯಾದರೂ ಆ ದೇವನನ್ನು ಮನಸ್ಸಿನಿಂದಲೂ ಸಹ ತಿಳಿಯಲು ಸಾಧ್ಯ
ವಿಲ್ಲ ಮತ್ತು ಈ ದೇವನು ಆದ್ಯಂತರಹಿತನಾಗಿರುವನು. ಇವನಿಗೆ
ನಾಶವೆಂಬುದಿಲ್ಲ. ಮೊಲಕ್ಕೆ ಕೊಂಬಿರುವುದೆಂದು ಹೇಳಲು ಹೇಗೆ
ಸಾಧ್ಯವಿಲ್ಲವೋ ಹಾಗೆ ಈ ದೇವನ ಸ್ವರೂಪವನ್ನು ಶಬ್ದಗಳಿಂದ ವಿವರಿ
ಸುವುದಕ್ಕಾಗಲಿ, ಮನಸ್ಸಿನಿಂದ ಊಹಿಸಿ ತಿಳಿಯುವುದಕ್ಕಾಗಲಿ ಸಾಧ್ಯ

ಮನಸಾ ಮನ್ತುಂ । ನೈವ ತ್ವೇಷ ನಾಶಮೇತಿ" ಶ್ರುತಯಂ ವ್ಯಾಖ್ಯಾತಂ । ನನು ಶಶವಿಷಾಣಾದಿಕಮಿಾದೃಕ್ತ್ರಿವಿಧಮಿತಿ ತತ್ಸಮಃ ಸಾಂಬಃ ಪ್ರಾಪ್ನೋತಿ । ನ ಪ್ರಾಪ್ನೋತಿ । ಕಿಂ ಕಾರಣಂ ? ದಿವ್ಯತೇಜೋಮಯೋಽಸಾವಿತಿ । ಅಯಮಭಿಸನ್ಧಿಃ । ಯೋಗಿನೋ ಧ್ಯಾಯನ್ತಿ ಪ್ರತ್ಯಕ್ಷಯನ್ತಿ ಚ ತಂ ತೇಜೋರೂಪಂ ನ ಚ ನಶ್ವರಪಾರ್ಥಿವರೂಪಮಿತಿ । ನನು

---

ವಿಲ್ಲ. ಅಲ್ಲದೆ ಈ ದೇವನು ನಾಶವಿಲ್ಲದೆ ನಿತ್ಯನಾಗಿರುವನು. ಮೇಲೆ ಹೇಳಿದ ಈ ಗುಣಗಳೆಲ್ಲವೂ ಮೊಲದ ಕೋಂಬಿನಂತೆ ಅಪ್ರಸಿದ್ಧವಾಗಿರುವುದರಿಂದ ಈ ಗುಣಗಳುಳ್ಳ ಸಾಂಬಮೂರ್ತಿಯೂ ಸಹ ಇಲ್ಲವೆಂದೇ ಹೇಳಬೇಕಾಗುವುದು ಎಂಬ ಆಕ್ಷೇಪವು ಸಹಜವಾಗಿ ಉದ್ಭವಿಸುವುದು. ಆದರೆ ಅದು ಹಾಗಲ್ಲ. ಕಾರಣವೇನೆಂದರೆ—ಯೋಗಿಗಳಾದವರು, ಈ ಸಾಂಬಮೂರ್ತಿಯು ದಿವ್ಯವಾದ ತೇಜಸ್ಸಿನ ರೂಪದಿಂದ ಪ್ರಕಾಶಿಸುತ್ತಿರುವನು ಎಂದು ಹೇಳುವುದರಿಂದಲೂ, ಈ ವಿಧವಾದ ತೇಜೋರೂಪವನ್ನೇ ಧ್ಯಾನದಿಂದ ಸಾಕ್ಷಾತ್ಕಾರಮಾಡಿಕೊಳ್ಳುವುದರಿಂದಲೂ ಹಿಂದೆ ಹೇಳಿರುವ ಆಕ್ಷೇಪವು ಯುಕ್ತವಾಗಿರುವುದಿಲ್ಲ. ಯೋಗಿಗಳ ಅನುಭವವನ್ನು ಪ್ರಮಾಣವೆಂದು ಒಪ್ಪಬೇಕಾಗಿರುವುದು. ಮತ್ತು ಯೋಗಿಗಳಾದವರು ಈ ದೇವನ ದಿವ್ಯವಾದ ತೇಜೋಮಯವಾದ ರೂಪವನ್ನು ಧ್ಯಾನಮಾಡುವರೇ ಹೊರತು ಪಾರ್ಥಿವಸಂಬಂಧವಾದ ಸಾಕಾರಮೂರ್ತಿಯನ್ನು ಧ್ಯಾನಮಾಡಿ ಪ್ರತ್ಯಕ್ಷಮಾಡಿಕೊಳ್ಳುವುದಿಲ್ಲ. ಪಾರ್ಥಿವರೂಪವು ಯಾವಾಗಲೂ ನಾಶವಾಗುವ ಸ್ವಭಾವವುಳ್ಳದ್ದಾಗಿರುವುದು. ಆದುದ

**ಧ್ಯಾಯಮಾನಃ ಪ್ರಕಾಶೇತ ನೋದಾಸೀನಾವಸ್ಥಾಯಾಂ ಅಪ್ರಕಾಶಮಾನಶ್ಚಾಸನ್ನಿತಿ । ನಶ್ವರಃ ಕ್ಷಣಿಕಃ ಸ ಸಾಂಬ ಇತಿ ಪ್ರತ್ಯವಸ್ಥಾನಂ ಬೌದ್ಧಮತೀಯಂ ನಿರುಣದ್ಧಿ । ನಿತ್ಯ ಇತಿ । ಇದಮತ್ರಾಕೂತಂ—ಪ್ರತ್ಯಭಿಜ್ಞಯಾ ಹಿ ಅರ್ಥಾ**

---

ರಿಂದಲೇ ತೇಜೋಮಯವಾದ ಈ ದೇವನ ರೂಪವನ್ನೇ ಧ್ಯಾನಮಾಡಿ ಸಾಕ್ಷಾತ್ಕಾರಮಾಡುವ ಯೋಗಿಗಳು ಬೌದ್ಧಮತದವರು ಹೇಳುವ ಕ್ಷಣಿಕೇಶ್ವರವಾದವನ್ನು ಖಂಡಿಸುವರು.

"ಆಸ್ತಿಕರಾದ ಜನರು ಒಪ್ಪಿರುವ ದೇವಸ್ವರೂಪವು ಧ್ಯಾನಕಾಲದಲ್ಲಿ ಮಾತ್ರ ಗೋಚರವಾಗುವುದು. ಉದಾಸೀನರಾಗಿ ಧ್ಯಾನಾದಿಗಳಲ್ಲಿ ಅಂತರ್ಮುಖರಾಗದೆ ಇರುವಾಗ ಈ ರೂಪವು ಗೋಚರವಾಗುವುದಿಲ್ಲ. ಆದ್ದರಿಂದ ಕ್ಷಣಿಕವಾದದ್ದು. ನಾಶವನ್ನು ಹೊಂದುವ ಸ್ವಭಾವವುಳ್ಳದ್ದು ನಾಶವಾಗುವುದರಿಂದ ಇದು ಅಸತ್ಪದಾರ್ಥವಾಗುವುದು" ಎಂದು ಬೌದ್ಧ ಮತದವರು ಹೇಳುವರು. ಹೀಗೆ ಹೇಳುವ ಬೌದ್ಧಮತದವರ ಸಿದ್ಧಾಂತವನ್ನು ಯೋಗಿಗಳೂ ಸಾಂಖ್ಯಶಾಸ್ತ್ರಜ್ಞರೂ ಒಪ್ಪುವುದಿಲ್ಲ. ಈ ಸಾಂಬ ಮೂರ್ತಿಯ ಸ್ವರೂಪವು ಈ ಉಪನಿಷತ್ತಿನಲ್ಲಿಯೂ "ವಾಙ್ಮನೋಽಗೋಚರಾನಂತದಿವ್ಯತೇಜೋಮಯೋ ನಿತ್ಯೋ ನಿರ್ವಿಕಲ್ಪಃ" ಎಂಬ ಇವೇ ಮೊದಲಾದ ರೀತಿಯಿಂದ ಉಕ್ತವಾಗಿರುತ್ತದೆ.

ಒಂದು ವಸ್ತುವನ್ನು ಹಿಂದೆ ನೋಡಿ ತಿಳಿದುಕೊಂಡಿರುವವನು ಪುನಃ ಅದನ್ನು ನೋಡಿದಾಗ ಹಿಂದಿನ ತನ್ನ ಆ ವಸ್ತುಜ್ಞಾನದಿಂದ,

**ಅನವಧ್ರಿಯನ್ತೇ ನೈವ ತು ಯೋಗಿನೋ ನಶ್ವರಂ ಕ್ಷಣಿಕಂ ಪ್ರತ್ಯಭಿಜಾನನ್ತಿ, ಅಪಿ ಸದೈಕರೂಪಂ ನ ಚೇಯತಾ-ಮನೋಗೋಚರತಾಪಾತಃ । ಇದಮತ್ರ ನಿದರ್ಶನಂ ।**

ನಾನು ಹಿಂದೆ ನೋಡಿದ ಪದಾರ್ಥವು ಇದೇ ಆಗಿರುವುದು ಎಂದು ಜ್ಞಾಪಿಸಿಕೊಳ್ಳುವನು. ಈ ಪ್ರಕಾರವಾದ ಸ್ಮೃತ್ಯುದ್ಬುದ್ಧಸಂಸ್ಕಾರವು (ಅನುಭವಜನ್ಯಸಂಸ್ಕಾರಸ್ಮರಣೆಯು) ಪ್ರತ್ಯಭಿಜ್ಞೆಯೆನಿಸುವುದು. ಇದರಲ್ಲಿ ಪೂರ್ವದೃಷ್ಟವಾದ ದೇಶಕಾಲವಿಷಯಕವಾದ ಸ್ಮೃತಿಯು ಈಗಿನ ದೇಶಕಾಲಗಳಲ್ಲಿ ಉದ್ಬುದ್ಧವಾಗಿ ವಸ್ತುಸ್ವರೂಪಾನುಭವಜ್ಞಾನವು ಉಂಟಾಗುವುದು. ಯೋಗಿಗಳು ತಮ್ಮ ಗುರುಗಳಿಂದ ಉಪದಿಷ್ಟವಾದ ರೀತಿಯಿಂದ ಧ್ಯಾನಮಾಡುವಾಗ ತಾವು ಸಾಕ್ಷಾತ್ಕಾರಮಾಡಿರುವ ದಿವ್ಯ ತೇಜೋಮಯನಾದ ಸಾಂಬಮೂರ್ತಿಯನ್ನು ಪ್ರತ್ಯಭಿಜ್ಞೆಯಿಂದಲೇ ಸಾಕ್ಷಾತ್ಕಾರಮಾಡುತ್ತಿರುವರು. ಬೌದ್ಧರು ಒಪ್ಪಿರುವ ಕ್ಷಣಿಕವಾದ ಎಂದರೆ ಒಂದುಕ್ಷಣದಲ್ಲಿ ಇದ್ದು ಇನ್ನೊಂದು ಕ್ಷಣಕ್ಕೆ ಬದಲಾವಣೆಯನ್ನು ಹೊಂದುವ ರೂಪವನ್ನು ಸಾಕ್ಷಾತ್ಕರಿಸುವುದಿಲ್ಲ. ಪ್ರತಿಯೊಂದು ಕ್ಷಣದಲ್ಲಿಯೂ ಬದಲಾವಣೆಯನ್ನು ಹೊಂದುವ ನಶ್ವರವಾದ ಕ್ಷಣಿಕ ವಸ್ತುವು ಪ್ರತ್ಯಭಿಜ್ಞೆಗೆ ವಿಷಯವೇ ಆಗುವುದಿಲ್ಲ. ಆದುದರಿಂದಲೇ ಇದನ್ನು ಒಪ್ಪಲು ಸಾಧ್ಯವಿಲ್ಲ.

ಇವಲ್ಲದೆ ಬೌದ್ಧಮತದವರು ಒಪ್ಪಿರುವ ಕ್ಷಣಿಕತ್ವವನ್ನು ನಿರಾಸವಮಾಡುವುದಾದರೆ ಸಾಂಬಮೂರ್ತಿಯು ನಿತ್ಯನಾಗಿರುವನೆಂದು ಹೇಳಬೇಕಾಗುವುದು. ಯಾವಾಗಲೂ ಒಂದೇವಿಧವಾದ ಆಕಾರವುಳ್ಳವ

ಘಟಗರ್ಭಂ ದೀಪಗರ್ಭಂ ಚೇತಿ ಅಪವರಕದ್ವಯಂ ಪಶ್ಯಾಮಃ । ಯದಾ ಆದ್ಯಮಪವರಕಂ ಆವೃಣ್ವತೀಂ ಭಿತ್ತಿಂ ಭಿನತ್ತಿ ಚೈತ್ರಃ ನ ತರ್ಹಿ ತಾವತಾ ಘಟಮೀಕ್ಷತೆ ತತ್ಕಸ್ಯ ಹೇತೋಃ ದೀಪಾದಿಕಂ ಪ್ರಕಾಶಕಂ ಯತೋ ನಾಸ್ತೀತಿ । ಯದಾ ಪುನರಂತಿಮಂ ತಾವತೈವ ತರ್ಹಿ ದೀಪಮೀಕ್ಷತೆ ತತ್ಕಸ್ಯ ಹೇತೋಃ ಸ್ವತೋऽಸೌ ಪ್ರಕಾಶಾತ್ಮೇತಿ । ಏವಮೇವಾತ್ಮೇಹ ದೀಪಭಾಸಂ ಭಾಸತೆ ಯೋಗಿನಃ ಆತ್ಮಾನಮಾವೃಣ್ವತ್ವಜ್ಞಾನಂ ಭಿತ್ತಿಭೇದಂ ಭಿನತ್ತಿ

---

ನಾದರೂ ಸಾಂಬಮೂರ್ತಿಯು ಮನಸ್ಸಿಗೆ ಗೋಚರನಾಗಿರಬೇಕೆಂಬ ನಿರ್ಣಯವೇನೂ ಇರುವುದಿಲ್ಲ. ಆವರಣರೂಪವಾದ ಅಜ್ಞಾನದ ನಾಶದಿಂದ ಪದಾರ್ಥಜ್ಞಾನವುಂಟಾಗುವುದು. ಆವರಣವು ಘಟಗರ್ಭವೆಂದೂ ದೀಪಗರ್ಭವೆಂದೂ ಎರಡು ವಿಧವಾಗಿರುವುದು. ಮೊದಲನೆಯದಾದ ಘಟಗರ್ಭವೆಂಬ ಆವರಕದ ಭಿತ್ತಿಯನ್ನು ಭೇದಿಸಿದರೂ ಘಟವು ಪ್ರತ್ಯಕ್ಷವಾಗುವುದಿಲ್ಲ. ಏಕೆಂದರೆ ದೀಪದಂತೆ ಪ್ರಕಾಶವಾದ ತೇಜಸ್ಸೇ ಮೊದಲಾದವುಗಳ ಸಹಾಯವಿಲ್ಲದಿರುವುದೇ ಇದಕ್ಕೆ ಕಾರಣವು. ಎರಡನೆಯದಾದ ದೀಪಗರ್ಭವೆಂಬ ಆವರಕವನ್ನು ನಿಶ್ಚಯಮಾಡುವುದಾದರೆ ಅಷ್ಟುಮಾತ್ರದಿಂದಲೇ ದೀಪದರ್ಶನವುಂಟಾಗುವುದು. ಏಕೆಂದರೆ ಅದಕ್ಕೆ ಸ್ವಪ್ರಕಾಶವುಂಟು. ಆ ಪ್ರಕಾಶದ ಸಹಾಯದಿಂದ ಅದನ್ನು ನೋಡಬಹುದು. ಬೇರೆ ವಿಧವಾದ ಸಹಾಯ ಬೇಕಿಲ್ಲ. ಸಾಂಬಮೂರ್ತಿಯು ಸ್ವಪ್ರಕಾಶದಿಂದಲೇ ಪ್ರಕಾಶಿಸುತ್ತಿರುವನು. ಈ ದೇವನ

ಯೋಗೀತಿ ನಾತ್ಮಾ ಮನೋವಿಷಯತಾಮುಕ್ಷ್ನವೀತೀತಿ ।
ತೇಜೋಮಯ ಇತಿ ಸ್ವರೂಪಾರ್ಥಕೋ ಮಯಟ್ ನಾತೋ
ವಿಕಾರಾತ್ಮತಾ ತದನು ನಶ್ವರತಾ ವಾ ಆರೋಪಣೀಯೇತಿ
ಬೋಧ್ಯಂ । ಯದಾ ಚೈಷ ಸದೈಕರೂಪತಯಾ ಯೋಗಿಭಿ-
ರನುಭೂಯತೇ ಇತಿ ಸಿದ್ಧಂ ತದಾ ಈದೃಗ್ರೂಪಸ್ತಾದೃ-
ಗ್ರೂಪೋಽನ್ಯಾದೃಗ್ವೇತಿ ವಿರುದ್ಧಾಃ ಕಲ್ಪನಾಃ ನಿರ್ಗಚ್ಛನ್ತೀತಿ
ನಿರ್ವಿಕಲ್ಪಃ । ಯತ್ಪುನರ್ವಾಗಗೋಚರತ್ವಮುಕ್ತಂ ತತ್ರ

---

ಪ್ರಕಾಶದಿಂದಲೇ ದೀಪಾದಿಗಳ ಪ್ರಕಾಶವುಂಟಾಗುವುದು. ಸ್ವಪ್ರಕಾಶ ರೂಪನಾಗಿರುವ ಆತ್ಮನ ಸ್ವರೂಪವನ್ನು ಅಜ್ಞಾನವು ಆವರಿಸಿರುವುದು. ಯೋಗಿಯಾದವನು ಸ್ವಪ್ರಕಾಶದಿಂದ ಬೆಳಗುತ್ತಿರುವ ತನ್ನ ಸ್ವರೂಪ ವನ್ನು ಸಾಕ್ಷಾತ್ಕರಿಸುವುದಕ್ಕಾಗಿ ಆವರಕವಾಗಿರುವ ಅಜ್ಞಾನವನ್ನು ಭೇದಿಸುವನು. ಆತ್ಮಸಾಕ್ಷಾತ್ಕಾರವಾಗಲು ಯೋಗಿಗೂ ಕೂಡ ಧ್ಯಾನಾ ದಿಗಳು ಅವಶ್ಯಕವಾಗಿರುವುದರಿಂದ ಆತ್ಮಸ್ವರೂಪವು ವಾಙ್ಮನೋಽ- ಗೋಚರವಾಗಿರುವುದು. ಮತ್ತು ಆತ್ಮಸ್ವರೂಪವು ಸ್ವಪ್ರಕಾಶವಾಗಿರು ವುದರಿಂದ ತೇಜೋಮಯವಾಗಿರುವುದು ಎಂದು ತಿಳಿಯಬೇಕು. ತೇಜೋಮಯವೆಂಬ ಶಬ್ದದಲ್ಲಿ ಮಯಟ್ ಪ್ರತ್ಯಯವು ಸ್ವರೂಪಾರ್ಥ ದಲ್ಲಿ ಉಕ್ತವಾಗಿರುವುದು. ವಿಕಾರಾರ್ಥದಲ್ಲಿ ಉಕ್ತವಾಗಿರುವುದಿಲ್ಲ ವಾದಕಾರಣ ನಶ್ವರತ್ವವೇ ಮೊದಲಾದ ದೋಷಗಳು ಆತ್ಮಸ್ವರೂಪದಲ್ಲಿ ರುವುದಿಲ್ಲವೆಂದು ತಿಳಿಯಬೇಕು.

ಹೇತುಂ ಜಿಜ್ಞಾಸಮಾನಾಯ ತಸ್ಮಾಹ । ನಿರಂಜನ ಇತಿ । ಅಂಜನಂ ವಿಶೇಷಕಂ ಜಾತಿಗುಣಕ್ರಿಯಾತ್ಮಕಮನುರೂಪಂ ನಿರ್ಗತಂ ಸಾಂಬಾದಿತಿ ನಿರಾಖ್ಯಾತಃ । ಬ್ರಾಹ್ಮಣಶಬ್ದೋ ಹಿ ಜಾತ್ಯಾ ವಿಶೇಷೇಣ ಪ್ರವರ್ತತೇ ಕೃಷ್ಣ ಇತಿ ಚ ಗುಣೇನ, ಪಾಚಕ ಇತಿ ಚ ಕ್ರಿಯಯಾ, ನೇದಮಂಜನತ್ರಯಂ ಸಾಂಬೋಽಸ್ತಿ ಇತಿ ಸುಷ್ಠೂಕ್ತಂ ನಿರಾಖ್ಯಾತ ಇತಿ । ನನು ಹರೋಽಯಂ, ಯ ವಿಷೋಽಂಜನಶಬ್ದೋ ವಿಶೇಷಕಾಭಿಧಾಯೀತಿ ಸ ಹರ ಇತಿ ವದಾಮಃ । ಕಥಂ ಕೃತ್ವಾ?

---

ಈ ಪ್ರಕಾರದಿಂದ ಇರುವ ಆತ್ಮಸ್ವರೂಪವು ಏಕರೂಪವಾಗಿರುವುದೆಂದು ಯೋಗಿಗಳ ಅನುಭವವು. ಆತ್ಮಸ್ವರೂಪ ವಿಷಯದಲ್ಲಿ ಹಾಗೆ, ಹೀಗೆ ಅಥವಾ ಬೇರೆವಿಧವೆಂಬ ಕಲ್ಪನೆಯು (ಅಭಿಪ್ರಾಯ ಭೇದವು) ಉಂಟಾಗಲು ಅವಕಾಶವೇ ಇರುವುದಿಲ್ಲ. ಆದುದರಿಂದ ಆತ್ಮಸ್ವರೂಪವು ನಿರ್ವಿಕಲ್ಪವೆನಿಸಿರುತ್ತದೆ ಈ ಆತ್ಮಸ್ವರೂಪಕ್ಕೆ ಜಾತಿ ಕ್ರಿಯಾ ಗುಣ ಎಂಬ ಭೇದಸಂಬಂಧವಾದ ರೂಪಾಂತರವೂ ಇರುವುದಿಲ್ಲ. ಬ್ರಾಹ್ಮಣತ್ವಾದಿಗಳು, ಜಾತಿಗಳು, ಕೃಷ್ಣಃ, ಶುಕ್ಲಃ ಎಂಬಿವು ಗುಣವಾಚಕಗಳು, ಪಾಚಕಃ ಮೊದಲಾದವು ಕ್ರಿಯಾವಾಚಕಗಳು. ಆತ್ಮಸ್ವರೂಪಕ್ಕೆ ಈ ಮೂರು ವಿಧವಾದ ಜಾತಿಕ್ರಿಯಾಗುಣಸಂಬಂಧವಾದ ವಿಶೇಷಗಳೂ ಇರುವುದಿಲ್ಲ ಮತ್ತು ಈ ಜಾತಿಯೇ ಮೊದಲಾದವುಗಳ ವಿಶೇಷಗಳಿಗೆ ಆಸ್ಪದವಿಲ್ಲದ ಕಾರಣ ಈ ಆತ್ಮಸ್ವರೂಪವು ನಿರಂಜ

"ಅಞ್ಜೂ ವ್ಯಕ್ತಿಮ್ರುಕ್ಷಣಕಾಂತಿಗತಿಷು" ಇತಿ "ಕರಣಾಧಿಕರಣಯೋಶ್ಚ" ಇತಿ ಚ ಪಾಣಿನೀಯಂ ಶಾಸನಂ ಪ್ರಮಾಣಯೇತಿ ವದಾಮಃ । ಗತ್ಯರ್ಥಾ ಜ್ಞಾನಾರ್ಥಾ ಇತ್ಯವೋಚಾಮ, ತನ್ನ ಸ್ಮರ್ತ್ತವ್ಯಂ ವೈಷಯಿಕಂ ಚಾಧಿಕರಣಂ ತತಶ್ಚ ಜ್ಞಾನವಿಷಯಃ ಅಂಜನಶಬ್ದಾರ್ಥಃ । ಶಬ್ದಜನ್ಯಪ್ರತೀತಿ-

---

ನವೆನಿಸಿರುವುದು. "ಅಞ್ಜೂ ವ್ಯಕ್ತಿಮ್ರುಕ್ಷಣಕಾಂತಿಗತಿಷು" ಎಂಬ ಪಾಣಿನಿಯ ಸೂತ್ರದಲ್ಲಿ ಹೇಳಿರುವಂತೆ ಅಞ್ಜೂಧಾತುವು ಗತ್ಯರ್ಥವುಳ್ಳದ್ದಾಗಿರುವುದು. ಗತ್ಯರ್ಥವಾದ ಧಾತುಗಳು ಜ್ಞಾನಾರ್ಥಕಗಳಾಗಿಯೂ ಇರುವುದರಿಂದ "ಕರಣಾಧಿಕರಣಯೋಶ್ಚ" ಎಂಬ ಪಾಣಿನಿಸೂತ್ರದಂತೆ ಅಧಿಕರಣಾರ್ಥದಲ್ಲಿ ಅಂಜನಶಬ್ದವು ನಿಷ್ಪನ್ನವಾಗಿ ಜ್ಞಾನವಿಷಯಃ ಎಂಬ ಅರ್ಥವನ್ನು ಬೋಧಿಸುವುದು. ಅಂಜನಶಬ್ದದ ಅರ್ಥವು ಶಬ್ದಜನ್ಯಪ್ರತೀತಿವಿಷಯವಾಗಿರುವುದು.

ಶಬ್ದವೂ ಅರ್ಥವೂ ನಿತ್ಯವು. ಮತ್ತು ಇವೆರಡಕ್ಕೂ ಇರುವ ಸಂಬಂಧವೂ ನಿತ್ಯವು. ಸಂಬಂಧವು ಮಾತ್ರ ಅನುಯೋಗಿ ಅಥವಾ ಪ್ರತಿಯೋಗಿಗತವಾದ ಅನಿತ್ಯತ್ವಕ್ಕನುಸಾರವಾಗಿ, ಅನಿತ್ಯವಾಗಿರುತ್ತದೆ. ಶಬ್ದವು ಜಾತಿಯನ್ನು ಬೋಧಿಸುವಾಗ ಜಾತಿಗತವಾದ ನಿತ್ಯತ್ವಕ್ಕನುಸಾರವಾಗಿ ಸಂಬಂಧವು ನಿತ್ಯವಾಗುವುದು. ಇದರಿಂದಲೇ ಶಬ್ದವು ವ್ಯಕ್ತಿಬೋಧಕವಲ್ಲ. ವ್ಯಕ್ತಿಗಳು ಉತ್ಪತ್ತಿವಿನಾಶಗಳನ್ನು ಹೊಂದುತ್ತವೆಂಬುದು ಪ್ರತ್ಯಕ್ಷಗೋಚರವಾಗಿರುವುದು. ಈ ವ್ಯಕ್ತಿಗಳೂ ಕೂಡ ಜಾತಿಯನ್ನು ಅನುಸರಿಸಿಕೊಂಡು ಅನೇಕವಾಗಿರುವವು. ಈ ಕಾರಣದಿಂದ

**ವಿಷಯ ಇತಿ ಸ್ಫುಟತಿ । ಯದಾಹ ಹರಿಃ—ಜಾತಿಪ್ರತ್ಯಾ-ಯಕೇ ಶಬ್ದೇ ಯಾ ವ್ಯಕ್ತಿರನುಷಜ್ಯತೇ ನ ತಾನ್ವ್ಯಕ್ತಿಗತಾ ಭೇದಾ ಜಾತಿಶಬ್ದೋಽವಲಂಬತೇ ಇತಿ । ಇದಮತ್ರಾ-ಕೂತಂ । ಶಬ್ದಸ್ಯಾರ್ಥೇನ ಸಂಬಂಧೋ ನಿತ್ಯಃ, ಸ ಏಷ ಸಂಬಂಧೋಽನುಯೋಗಿನಂ ಪ್ರತಿಯೋಗಿನಂ ವಾ ಅನಿತ್ಯ-ಮಾಶ್ರಯೇ ನ ನಿತ್ಯಃ ಸ್ಯಾತ್ । ತದಿಹಾರ್ಥೇನ ವಾ ಶಬ್ದೇನ ವಾ ನಿತ್ಯೇನೈವ ಭಾವ್ಯಂ, ಸತ್ಯೇವಂ ಯದಿ ಶಬ್ದೋ ವ್ಯಕ್ತಿ-ಮಭಿದಧತಿ ಧ್ರುವಂ ಸಂಬಂಧೋಽನಿತ್ಯಃ ಸ್ಯಾತ್ । ಅತೋ**

---

ವ್ಯಕ್ತಿಗಳ ವಿಷಯದಲ್ಲಿ ಭೇದಜ್ಞಾನವುಂಟಾಗುವುದು. ವ್ಯಕ್ತಿಗತವಾದ ಭೇದಜ್ಞಾನವನ್ನು ನಿಮಿತ್ತಮಾಡಿಕೊಂಡು ಜಾತಿಬೋಧಕವಾದ ಶಬ್ದವು ಅರ್ಥವನ್ನು ಬೋಧಿಸಲು ಪ್ರವೃತ್ತವಾಗುವುದಿಲ್ಲ. ಮತ್ತು ಜಾತಿವ್ಯಕ್ತಿಗತವಾದ ಭೇದನಿಮಿತ್ತದಿಂದ ಶಬ್ದ ಮತ್ತು ಅರ್ಥಗಳ ಸಂಬಂಧವು ಅನಿತ್ಯವೆಂದು ಹೇಳಲಾಗುವುದಿಲ್ಲ. ಈ ಅಭಿಪ್ರಾಯ ದಿಂದಲೇ ಭರ್ತೃಹರಿಯು—

**ಜಾತಿಪ್ರತ್ಯಾಯಕೇ ಶಬ್ದೇ ಯಾ ವ್ಯಕ್ತಿರನುಷಜ್ಯತೇ ।**
**ನ ತಾನ್ವ್ಯಕ್ತಿಗತಾನ್ ಭೇದಾನ್ ಜಾತಿಶಬ್ದೋಽವಲಂಬತೇ ॥**

ಎಂದರೆ, ಜಾತಿಬೋಧಕವಾದ ಶಬ್ದವು ಜಾತಿಯನ್ನು ಬೋಧಿಸುವಾಗ ವ್ಯಕ್ತಿಯು ಉಪಸ್ಥಿತವಾಗುವುದು. ಆದರೆ ವ್ಯಕ್ತಿಗತವಾದ ಭೇದವನ್ನು ಜಾತಿಶಬ್ದವು ಹೊಂದಿರಬೇಕೆಂಬ ನಿಯಮವಿಲ್ಲ ಎಂದು ಮೇಲಿನ ಶ್ಲೋಕವನ್ನು ಹೇಳಿರುವನು. ಈ ಕಾರಣದಿಂದ ಅಂಜನಶಬ್ದವು

ಜಾತಿಮೇವ ನಿತ್ಯಾಮಭಿದಧೀತ, ನ ವ್ಯಕ್ತಿಂ ಪ್ರತ್ಯಕ್ಷದೃಷ್ಟ-ನಶ್ವರಭಾವಾಂ ಯಾಃ ಪುನಃ ಪುನಃ ಪ್ರತೀಯಮಾನ-ಜಾತ್ಯಾನುಷಂಗಿಣ್ಯೋ ವ್ಯಕ್ತಯೋಽನೇಕಾ ಇತಿ ಭೇದ-ಪ್ರತ್ಯಯಃ । ನ ಸ ಭೇದಃ ಜಾತಿಬೋಧಕಶಬ್ದ ಪ್ರಮೇಯ ಇತಿ । ನ ತನ್ನಿಬಂಧನಂ ಸಂಬಂಧಾನಿತ್ಯತಾಸಾದನಮವ-ಕಾಶೇತ । ಸರ್ವಥಾಪಿ ಸಿದ್ಧಂ "ಅಂಜನಶಬ್ದಃ ಪ್ರತೀಯ-ಮಾನಾರ್ಥವಾಚಕ" ಇತಿ । ತಮೇವ ಪ್ರತೀಯ-ಮಾನಮರ್ಥಂ ವಿಶೇಷಕಶಬ್ದೇನ ವ್ಯಾಪರಾಮೇತಿ । ಕುತ-ಸ್ತ್ಯೋಽಯಂ ಹಠಾತ್ಕಾರವಾದ ಇತಿ । ಇಯದ್ವಿಶೇಷಣಾನಿ ನಿಷಿಧ್ಯಮಾನಾನಿ ನಿಷೇಧಾವಧಿಮಧಿಷ್ಠಾನಂ ಬೋಧಯೇ-ಯುರಿತಿ ಉಪನಿಷದೋ ಹೃದಯಮುದ್ಘಾಟಿತಂ। ಕ್ಷಣಿಕತಾ

---

ಪ್ರತೀಯಮಾನಾರ್ಥವಾಚಕವಾಗಿರುವುದು ಎಂದು ನಿರ್ಣಯವು. ಅಂಜನಶಬ್ದದಿಂದ ಪ್ರತೀಯಮಾನಾರ್ಥವಾದ ವಿಶೇಷಕ ಎಂಬ ಅರ್ಥ ವನ್ನು ಇಲ್ಲಿ ಅಂಗೀಕರಿಸಿರುತ್ತದೆ. ನಿರಂಜನಂ ಎಂದು ಸಾಂಬಮೂರ್ತಿ ಸ್ವರೂಪಬೋಧಕವಾದ ವಿಶೇಷಣಪದದಿಂದ ನಿಷಿಧ್ಯಮಾನವಾದ ನಿಷೇಧ ದಿಂದ ನಿಷೇಧಾವಧಿಯಾದ ಅಧಿಷ್ಠಾನವನ್ನು ಬೋಧಿಸುವುದಕ್ಕಾಗಿಯೇ ಅಂಜನಶಬ್ದಕ್ಕೆ ಬಲಾತ್ಕಾರವಾಗಿ ಈ ವಿಧವಾದ ಅರ್ಥವ್ಯುತ್ಪತ್ತಿಯನ್ನು ಹೇಳಿರುತ್ತದೆ.

ಉಪನಿಷತ್ತುಗಳೆಲ್ಲವೂ ಆತ್ಮಸ್ವರೂಪವನ್ನು ಬೋಧಿಸುವುವು. ಅದರಂತೆ ಈ ಉಪನಿಷತ್ತೂ ಕೂಡ ಆತ್ಮಸ್ವರೂಪವನ್ನು ಬೋಧಿಸು

**ಚಾಧಿಷ್ಠಾನಸ್ಯ ಯೋಗಿಪ್ರತ್ಯಭಿಜ್ಞಯಾ ನಿರ್ಧಾರಿತಾ ತದನು ಸ್ವರೂಪತೋಽಧಿಷ್ಠಾನಭೂತಃ ಸಾಂಬೋಽವಗಮಯಿತವ್ಯ ಇತಿ ಪ್ರವರ್ತತೇ ಶ್ರುತಿಃ । ಅತಿಶುದ್ಧೋ ದೇವ ಇತಿ । ಚಿದ್ರೂಪ ಆನಂದರೂಪಶ್ಚ ತದರ್ಥಃ । ಅಶುದ್ಧತ್ವಂ ಹಿ ಅಸ್ವಪ್ರಕಾಶತ್ವವ್ಯಾಪ್ಯಂ, ಯದಿ ಅತಿಶುದ್ಧಃ ಸಾಂಬಸ್ತರ್ಹಿ ಅತ್ಯಂತಂ ಸ್ವಪ್ರಕಾಶ ಇತಿ ಯಾವದುಕ್ತಂ ಭವತಿ ಚಿದ್ರೂಪ ಇತಿ ತಾವದುಕ್ತಂ ಭವತಿ ಅತಿಶುದ್ಧ ಇತಿ । ಏವಂ**

---

ವುದಾಗಿ ನಿಷೇಧಾವಧಿಯಾದ ಅಧಿಷ್ಠಾನವನ್ನು ಬೋಧಿಸುವುದು. ಈ ಅಧಿಷ್ಠಾನವು ಕ್ಷಣಿಕವಾಗಿರುವುದು ಎಂಬ ವಿಷಯವು ಯೋಗಿಪ್ರತ್ಯಭಿಜ್ಞೆ ಯಿಂದಲೇ ತಿರಸ್ಕೃತವಾಗಿರುತ್ತದೆ. ಸಾಂಬಮೂರ್ತಿಯೇ ಈ ಪ್ರಕಾರ ವಾದ ಅಧಿಷ್ಠಾನನಾಗಿರುವನೆಂದು ತಿಳಿಯಬೇಕು ಎಂದು ಶ್ರುತಿಯು ಪ್ರತಿಪಾದಿಸುವುದು.

ಈ ಸಾಂಬಮೂರ್ತಿಯು ಅತಿಶುದ್ಧನಾಗಿರುವನು. ಅತಿಶುದ್ಧ ಪದಕ್ಕೆ ಚಿದ್ರೂಪನೂ ಆನಂದರೂಪನೂ ಆಗಿರುವನೆಂದರ್ಥವು. ಸ್ವಪ್ರಕಾಶವಿಲ್ಲದಿರುವುದೆಲ್ಲವೂ ಅಶುದ್ಧವೆನಿಸುವುದು. ಸಾಂಬ ಮೂರ್ತಿಯು ಸ್ವಪ್ರಕಾಶದಿಂದ ಬೆಳಗುತ್ತಿರುವುದರಿಂದಲೂ ಈ ಸ್ವಪ್ರಕಾಶವು ಚಿದ್ರೂಪದಿಂದಲೇ ಆಗಿರುವಕಾರಣ ಅತಿಶುದ್ಧನಾದ ಸಾಂಬಮೂರ್ತಿಯು ಚಿದ್ರೂಪದಿಂದ ಇರುವನೆಂದು ಸ್ಪಷ್ಟವಾಗಿರುತ್ತದೆ.

ದಿವ್ ಧಾತುವಿನಿಂದ ದೇವಶಬ್ದವು ಉಂಟಾಗಿರುತ್ತದೆ. ದಿವ್

**ಮೋದೋಽರ್ಥೋ ದಿವ್ ಧಾತೋಃ ಸ ಚ ಆನಂದರೂಪಃ ಇತಿ ಸಿದ್ಧಂ ಚಿದಾನಂದರೂಪತ್ವಂ ಸಾಂಬಸ್ಯ । ನ ಚಾಸತಃ ಶಶವಿಷಾಣಾದೇರೇತದುಭಯಾತ್ಮತಾ ಸಂಭಾವ್ಯತ ಇತಿ ತಯೋರುಪಪತ್ತ್ಯೈ ಸದ್ರೂಪತಾಕ್ಷಿಪ್ತಾ ಸ್ಯಾದಿತಿ ನ ಸದ್ರೂಪತಾಮಾಹೋಪನಿಷತ್ । ತಥಾ ಚ ಸಚ್ಚಿದಾನಂದರೂಪ ಇತಿ ಸ್ಫುಟಿತಂ । ಏಕ ಇತಿ ಕೇವಲ ಇತ್ಯರ್ಥಃ । ನ ತದ್ಭಿನ್ನಂ ವಸ್ತು ಪರಮಾರ್ಥತೋಽಸ್ತೀತಿ ಹೃದಯಂ ಯನ್ನಿಬಂಧನಮೇವ ಕೈವಲ್ಯಮಿತಿ ಮೋಕ್ಷಮಭಿಸಂದಧತೇ**

ಧಾತುವಿಗೆ ಮೋದ, ಆನಂದ ಎಂಬ ಅರ್ಥಗಳಿರುವವು. ಸಾಂಬ ಮೂರ್ತಿಯು ಆನಂದರೂಪನೂ ಆಗಿರುವನು. ಶಶವಿಷಾಣಾದಿಗಳು ಅಸತ್ತಾಗಿರುವವು. ಆದಕಾರಣ ಅವುಗಳಿಗೆ ಸದ್ರೂಪತಾವ್ಯಾಪ್ತಿಯು ಇರುವುದಿಲ್ಲ. ಆದ್ದರಿಂದಲೇ ಅವುಗಳಿಗೆ ಚಿದ್ರೂಪತ್ವವೂ ಆನಂದ ರೂಪತ್ವವೂ ಇರುವುದಿಲ್ಲ. ಸಾಂಬಮೂರ್ತಿಗೆ ಚಿದ್ರೂಪತ್ವ ಆನಂದ ರೂಪತ್ವಗಳಿರುವುದರಿಂದ ಸದ್ರೂಪತ್ವವೂ ಆಕ್ಷಿಪ್ತವಾಗಿ ಸಚ್ಚಿದಾನಂದ ರೂಪನೆಂದು ಸ್ಪಷ್ಟವಾಗಿರುತ್ತದೆ.

ಏಕಶಬ್ದದಿಂದ ಈ ಸಚ್ಚಿದಾನಂದರೂಪನಾದ ಸಾಂಬಮೂರ್ತಿಯು ಕೇವಲನಾಗಿರುವನು ಎಂದು ಅರ್ಥವಾಗುವುದು. ಇದರಿಂದ ಸಾಂಬ ಮೂರ್ತಿಗಿಂತಲೂ ಬೇರೆಯಾದ ಪರಮಾರ್ಥವಸ್ತುವು ಇಲ್ಲವೆಂದು ತಿಳಿಯಬೇಕು. ಮಹರ್ಷಿಗಳು, ಈ ಪ್ರಕಾರವಾದ ಕೇವಲಭಾವವನ್ನು **ಮೋಕ್ಷವೆಂದು ಹೇಳುವರು.**

ಮಹರ್ಷಯಃ । "ಪರಬ್ರಹ್ಮೇತಿ" ದೇಶಕಾಲಾಪರಿಚ್ಛೇದಾ-
ಭಿಪ್ರಾಯೇಣ ವ್ಯಾಪಕತಾಮಾಹ । ಆಕಾಶಾದಿಕಂ ಹಿ
ವ್ಯಾಪಕಮಭಿಮನ್ಯಂತೇ ತಾಂತ್ರಿಕಾಃ, ಸರ್ವಮೇವ ತತ್ತಾ-
ದೃಶಮಪೇಕ್ಷ್ಯ ವ್ಯಾಪಕತಮ ಇತ್ಯರ್ಥಃ । ಯಃ ಪುನರಿಮಂ
ವಾದಮಂಶಾನೋದಕಕಲ್ಪಂ ಗೃಹ್ಣಾನೋಪಹಸೇತ್ ತದ್ವ-
ಮನಾಯಾಹ । ವಿರಾಜತೇ ಇತಿ । ಸರ್ವಪ್ರತ್ಯಯಸಾಕ್ಷಿತ-

ಈ ಸಾಂಬಮೂರ್ತಿಯು ಪರಬ್ರಹ್ಮನು ಎಂದು ಹೇಳುವುದರಿಂದ ಇವನು ದೇಶಕಾಲಪರಿಚ್ಛೇದಗಳಿಗೆ ಒಳಪಡುವವನಲ್ಲವೆಂದು ತಿಳಿಯಬೇಕು. ಆದುದರಿಂದ ಇವನು ಎಲ್ಲಾ ಕಡೆಯಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ವ್ಯಾಪಿಸಿಕೊಂಡಿರುವನು. ತಾಂತ್ರಿಕರು, ಆಕಾಶಾದಿಗಳು ವ್ಯಾಪಕಗಳಾಗಿರುತ್ತವೆ ಎಂದು ಹೇಳುತ್ತಾರೆ. ಈ ಸಾಂಬಮೂರ್ತಿಯು ಆಕಾಶಾದಿಗಳನ್ನೂ ವ್ಯಾಪಿಸಿರುವನು. ಇವನಲ್ಲಿರುವ ವ್ಯಾಪಕತ್ವವು ಆಕಾಶಾದಿಗಳಲ್ಲಿರುವ ವ್ಯಾಪಕತ್ವಕ್ಕಿಂತಲೂ ಬೇರೆಯಾಗಿ ಎಲ್ಲವನ್ನೂ ವ್ಯಾಪಿಸಿರುವ ವ್ಯಾಪಕತ್ವವಾಗಿರುತ್ತದೆ. ಆದುದರಿಂದಲೇ ಇವನು ವ್ಯಾಪಕತಮನೆನಿಸುವನು.

ವ್ಯಾಪಕತಮನಾಗಿ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಈ ದೇವನು ಇರುವನು ಎಂದು ವಾದಮಾಡುವುದು ಕೇವಲ ಕಲ್ಪನೆಯೆಂದು ಕೆಲವರು ಹೇಳುವರು. ಇವರ ಅಭಿಪ್ರಾಯವು ಸರಿಯಾದುದಲ್ಲವೆಂದು ಬೋಧಿಸುವುದಕ್ಕಾಗಿ "ವಿರಾಜತೇ" ಎಂಬ ಶಬ್ದವನ್ನು ಪ್ರಯೋಗಿಸಿರುವುದು. ಈ ದೇವನು ಎಲ್ಲಕ್ಕೂ ಆದಿಯೆಂದು ಹೇಳುವುದಕ್ಕಾಗಿ ಸರ್ವಪ್ರಯತ್ನ

**ಯೇತಿ ಆದಿಃ । ತಮೇವ ಭಾಂತಮನುಭಾತಿ ಸರ್ವಮಿತಿ ಶ್ರುತ್ಯಂತರಾದಿತ್ಯರ್ಥಃ । ತದಿದಂ ಸರ್ವಮುಕ್ತಂ ಸಂಗ್ರಹ-ಸೂಕ್ತೌ । "ಸದ್ಭಾನಾನಂದರೂಪೋಽಪಿ" ಇತಿ ನಿರ್ದೇಶೇನ । ತೇನ ನಿಷೇಧಾ ಅಪಿ ಆಕ್ಷಿಪ್ತಾ ಭವಂತಿ । ಯೇ ಪುನರಿಹ ತರ್ಕರಸಿಕಾಸ್ತನ್ನಿಬಂಧನಮೇವ ತಮಪ್ಯರ್ಥಮನುಮಾನೇ-ನೈವ ಜಿಜ್ಞಾಸಂತೇ ಯಂ ಪ್ರತ್ಯಕ್ಷೇಣಾಕಲಯಂತಿ ತಾನ-**

---

ಗಳಿಗೂ ಸಾಕ್ಷಿಯಾಗಿ ಇರುವನು ಎಂದು ಹೇಳಿರುವುದಲ್ಲದೆ "ತಮೇವ ಭಾನ್ತಮನುಭಾತಿ ಸರ್ವಂ" ಎಂಬ ಶ್ರುತಿಯಿಂದಲೂ ಉಕ್ತವಾಗಿರುವುದು.

ಈ ವಿಷಯಗಳೆಲ್ಲವೂ ಸಂಗ್ರಹಸೂಕ್ತಿಯ ಪದ್ಯವಾದ "ಯೋ ಜೀವಾನ್ ಕರ್ಮವಶ್ಯಾನ್" ಎಂಬ ಪದ್ಯದಲ್ಲಿ "ಸದ್ಭಾನಾನಂದರೂಪಃ" ಎಂದು ಮೊದಲಾದ ಪದಗಳಿಂದ ನಿರ್ದೇಶವಮಾಡಿರುತ್ತದೆ. ಇದರಿಂದ ಈ ದೇವನ ವಿಷಯದಲ್ಲಿರುವ ನಿಷೇಧಗಳೆಲ್ಲವನ್ನೂ ಆಕ್ಷೇಪವಮಾಡಿ ನಿರಾಸವಮಾಡಿದಂತಾಯಿತು.

ತರ್ಕಶಾಸ್ತ್ರದಲ್ಲಿ ನಿಪುಣರಾದವರು ಪ್ರತ್ಯಕ್ಷದೃಷ್ಟವಾದ ವಿಷಯವನ್ನು ಅನುಮಾನಪ್ರಮಾಣದಿಂದಲೇ ತಿಳಿಯಲಪೇಕ್ಷಿಸುವರು. ಅವರಿಗೂ ಕೂಡ ಅನುಗ್ರಹಮಾಡುವುದಕ್ಕಾಗಿ "ತಮೇವ ಭಾಂತಮನು ಭಾತಿ ಸರ್ವಂ" "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಶ್ರುತಿ ವಾಕ್ಯಗಳು ಆತ್ಮನ ಸಾಕ್ಷಿಸ್ವರೂಪವನ್ನು ಹೇತುವ್ಯಾಪ್ತಿಯೇ ಮೊದಲಾದ ತರ್ಕಶಾಸ್ತ್ರದ ಮಾರ್ಗದಿಂದ ತಿಳಿಯಪಡಿಸುವುದಲ್ಲದೆ "ಸ ಏವಾಖಿಲಾ

ಸ ಏವಾಖಿಲಾಜಾಂಡಕೋಟೀನಾಂ ಮೂಲ-

ಹ್ಯನುಗೃಹ್ಣತೀ ಶ್ರುತಿರೇಷಾ "ಸ ಏವಾಖಿಲಾಜಾಂಡಕೋ-
ಟೀನಾಂ ಮೂಲಬೀಜಂ ಭವತಿ" ಇತಿ । ಅಜೈರ್ಜೀವೈಃ
ಪೂರಿತಾ ಅಂಡಾಃ ಅಜಂಡಾ ಇತಿ ಮಧ್ಯಮಪದಲೋಪಿ-
ಸಮಾಸಃ । ತೇಷಾಂ ಕೋಟಯಃ । ತದುತ್ಪತ್ತಿಹೇತು-
ಕರ್ತೇತ್ಯರ್ಥಃ । ಸ್ವರೂಪೇಣಾಜಾ ಅಪಿ ಜೀವಾ ಭಿನ್ನ-

ಜಾಂಡಕೋಟೀನಾಂ ಮೂಲಬೀಜಂ" ಎಂಬ ಶ್ರುತಿವಾಕ್ಯವೂ ಕೂಡ ಸಚ್ಚಿದಾನಂದಸ್ವರೂಪನಾಗಿ ಸಾಕ್ಷಿಯಾಗಿರುವ ಈ ದೇವನು ಸಮಸ್ತ ವಾದ ಬ್ರಹ್ಮಾಂಡಕೋಟಿಗಳಿಗೂ ಮೂಲಕಾರಣನಾಗಿರುವನು ಎಂಬರ್ಥ ವನ್ನು ಬೋಧಿಸುವುದು. ಈ ವಾಕ್ಯಗತವಾದ "ಅಜಾಂಡ" ಪದದಲ್ಲಿರುವ ಅಜಶಬ್ದಕ್ಕೆ ಜೀವರೆಂದು ಅರ್ಥವು."ಅಜೈಃ ಪೂರಿತಾಃ ಅಂಡಾಃ" ಎಂದರೆ ಜೀವರಿಂದ ತುಂಬಿರುವ ಅಂಡವು ಅಜಾಂಡವು ಎಂದು ಮಧ್ಯಮಪದ ಲೋಪವುಳ್ಳ ಸಮಾಸವನ್ನು ಹೇಳಿರುವುದರಿಂದ ಈರೀತಿಯಾದ ಅರ್ಥ ವಾಗುತ್ತದೆ. ಈ ಪ್ರಕಾರವಾಗಿರುವ ಅಂಡಗಳು ಅಸಂಖ್ಯಾತವಾಗಿರು ತ್ತವೆ ಎಂದು ಬೋಧಿಸುವುದಕ್ಕಾಗಿ ಕೋಟಿಸಂಖ್ಯಾವಾಚಕವಾದ ಕೋಟಿಪದವನ್ನು ಪ್ರಯೋಗಮಾಡಿರುವುದು.

ಈ ಅಸಂಖ್ಯಾತವಾದ ಬ್ರಹ್ಮಾಂಡಕೋಟಿಗಳಿಗೂ ಉತ್ಪತ್ತಿಕಾರಣ ವಿಷಯದಲ್ಲಿ ಇವನು ಕರ್ತೃವಾಗಿರುವನು. ಜೀವರುಗಳು ಸ್ವರೂಪ ದಿಂದ ಉತ್ಪತ್ತಿಯನ್ನೂ ನಾಶವನ್ನೂ ಹೊಂದಿರುವವರಲ್ಲ. ನಿತ್ಯರೇ

**ಭಿನ್ನ ಶರೀರಗ್ರಹಣೇನೋತ್ಪತ್ತಿಮಂತ ಆಖ್ಯಾಯಂತೇ ಅವಶ್ಯಂ ಚೈನಮೇನ್ವೈತತ್ಪ್ರತಿಪತ್ತವ್ಯಂ ಅನ್ಯಥಾ ಸ್ವರೂಪತ ಏವ ಜೀವಾನಾಮುತ್ಪತ್ತಿಮಂಗೀಕುರ್ವತಾಂ ಜಗದ್ವೈಚಿತ್ರ್ಯ-ಮಕಾರಣಕಂ ಸ್ಯಾತ್ । ಯತಸ್ತತ್ತದ್ವೈಚಿತ್ರ್ಯಹೇತುಂ ತತ್ತಜ್ಜನ್ಮನಿ ನೋಽಪಲಭಾಮಹ ಇತಿ । ಯದಾತ್ಮಿನೋಽಜಾ ಅಭ್ಯುಪಗಮ್ಯೇರನ್ ನ ತದಾ ಜಗದ್ವೈಚಿತ್ರ್ಯಮ - ಕಾರಣಕಂ ಸ್ಯಾತ್ ಪೂರ್ವಪೂರ್ವಜನ್ಮಜಕರ್ಮಣಾಂ**

---

ಆಗಿರುವರು. ಆದರೆ ಜೀವಭಾವದಿಂದ ಇರುವ ಬೇರೆಬೇರೆಯಾದ ಶರೀರಗಳನ್ನು ಹೊಂದಿರುವ ಕಾರಣ ಇವರಿಗೆ ಉತ್ಪತ್ತಿಯೇ ಮೊದಲಾದವುಗಳು ಔಪಚಾರಿಕವಾಗಿರುತ್ತವೆ. ಜೀವರಿಗೆ ಉಂಟಾಗಿರುವ ಜೀವಭಾವವು ಔಪಾಧಿಕವೆಂದು ತಿಳಿಯಬೇಕು. ಸ್ವರೂಪದಿಂದಲೂ ಜೀವರು ಉತ್ಪತ್ತ್ಯಾದಿಗಳನ್ನು ಹೊಂದಿರುವರು ಎಂದು ಅಂಗೀಕರಿಸುವುದಾದರೆ ಜಗತ್ತಿನ ವೈಚಿತ್ರ್ಯವೇ ಇಲ್ಲದೇ ಹೋಗುವುದು. ಜಗತ್ತಿನಲ್ಲಿ ಜೀವರುಗಳು ಅನೇಕ ವಿಧವಾಗಿರುವ ಉತ್ಪತ್ತ್ಯಾದಿಗಳನ್ನು ಹೊಂದಿರುವುದಕ್ಕೆ ಕಾರಣವನ್ನು ಹೇಳಬೇಕು. ಜೀವರುಗಳ ಉತ್ಪತ್ತ್ಯಾದಿಗಳಲ್ಲಿ ಅನೇಕ ವಿಧವಾದ ವೈಚಿತ್ರ್ಯವು ಇರುವುದು. ಈ ವಿಧವಾದ ವೈಚಿತ್ರ್ಯವು ಆಯಾಯ ಜನ್ಮಗಳಲ್ಲಿ ಉಂಟಾಗಿರುವುದು ಸಕಾರಣವಾಗಿರುತ್ತದೆ. ಜೀವರು ಅಜರಾಗಿರುವುದಾದರೆ, ಜಗದ್ವೈಚಿತ್ರ್ಯವು ಅಕಾರಣಕವಾಗಿರುವುದು. ಜಗದ್ವೈಚಿತ್ರ್ಯಕ್ಕೆ ಕಾರಣವು ಪೂರ್ವಪೂರ್ವ ಜನ್ಮಗಳಲ್ಲಿ ಆಚರಿಸುವ ಕರ್ಮಗಳು ಆಯಾಯ ಜನ್ಮಗಳಿಗಿಂತಲೂ ಮುಂದಿನ

**ತತ್ತದುತ್ತರವಿಚಿತ್ರಜಗತ್ಕಾರಣತ್ವೋಪಪತ್ತೇಃ । ನ ಚ ಜಡಾನಾಂ ಕರ್ಮಣಾಮೇವ ಹೇತುತಾಂ ಲೋಕೋಽವಗಚ್ಛಾಮಃ । ಅಪಿ ತು ಚೇತನಸ್ಯ ಕರ್ತುಃ । ತತಶ್ಚ— ಯದ್ಯತ್ಕಾರ್ಯಂ ತತ್ತತ್ಕಾರ್ಯೇಽಷ್ಟಸಂಹತಚೇತನಕರ್ತೃಕಮಿತಿ ಗೃಹೀತವ್ಯಾಪ್ತಿಕಾಸ್ತಾರ್ಕಿಕಾ ಅಪಿ ಜಗತಃ ಕರ್ತೃತ್ವೇನ ಸಾಂಬಮನುಮಿತಾಮಿತಿ ಭಗವತ್ಯಾಃ ಶ್ರುತೇರಭಿಸಂಧಿಃ । ಇಹ ಚಾಖಿಲಾಜಾಂಡಕೋಟೀನಾಮಿತಿ ನಿರ್ದೇಶಃ**

ಜನ್ಮಗಳ ವೈಚಿತ್ರ್ಯವನ್ನು ಉಂಟುಮಾಡುವುದಕ್ಕೆ ಕಾರಣವಾಗಿ ಇರುತ್ತವೆ. ಜಡವಾಗಿರುವ ಕರ್ಮಗಳು ಲೋಕದಲ್ಲಿ ಜಗದ್ವೈಚಿತ್ರ್ಯವುಂಟಾಗಲು ಕಾರಣವೆಂದು ಹೇಳುವುದಕ್ಕಾಗುವುದಿಲ್ಲ. ಆದರೆ ಚೇತನವಿಶಿಷ್ಟನಾದ ಕರ್ತೃವು ಕರ್ಮಗಳನ್ನು ಆಚರಿಸಿರುವನು. ಅವನ ಕಾರ್ಯದಿಂದ ವೈಚಿತ್ರ್ಯವು ಉಂಟಾಗಿರುವುದು. ಆದಕಾರಣ ಆಯಾಯ ಕಾರ್ಯಗಳು ಉಂಟಾಗಿರುವ ವಿಷಯದಲ್ಲಿ ಚೈತನ್ಯವಿಶಿಷ್ಟನಾದ ಕರ್ತೃವು ಇರಬೇಕು ಎಂದು ನಿಯತವಾಗಿ ತಿಳಿಯಬೇಕಾಗುತ್ತದೆ. ಇದರಿಂದ "ಯದ್ಯತ್ಕಾರ್ಯಂ ತತ್ತತ್ ಚೇತನಕರ್ತೃಕಂ" ಎಂದು ವ್ಯಾಪ್ತಿಯು ಸಿದ್ಧವಾಗುವುದು. ಈ ಪ್ರಕಾರವಾದ ವ್ಯಾಪ್ತಿಯಿಂದ ಜಗತ್ಕರ್ತೃತ್ವವನ್ನು ಈ ದೇವನಿಗೆ ತಾರ್ಕಿಕರು ಅನುಮಾನ ಪ್ರಮಾಣದಿಂದ ನಿಶ್ಚಯ ಮಾಡಿರುತ್ತಾರೆ. ಈ ಅಭಿಪ್ರಾಯವೇ ಶ್ರುತಿಯಲ್ಲಿ ನಿರ್ದೇಶಮಾಡಿರುವುದು.

ಇಲ್ಲಿ "ಅಖಿಲಾಜಾಂಡಕೋಟೀನಾಂ" ಎಂದು ನಿರ್ದೇಶಮಾಡಿರುವುದರಿಂದ ಈ ದೇವನ ಶಕ್ತಿಯು ಅಪರಿಮಿತವಾದದ್ದು ಎಂದು ತಿಳಿಸು

ಅಪರಿಮೇಯಾಂ ಕರ್ತುಃ ಶಕ್ತಿಮವಬೋಧಯಿತುಂ ಅಸಂಖ್ಯವಿಚಿತ್ರಜೀವಕೋಟಿಪೂರಿತಾ ಹಿ ಚತುರ್ದಶ-ಲೋಕಾಃ ತತ್ಸಂಪುಟಾತ್ಮಕ ಏಕೋಽಂಡಃ । ಸಂತಿ ಚೈವಂ ಜಾತೀಯಕಾನಾಮಂಡಾನಾಂ ಕೋಟಯಃ ನ ಚೈತತ್ಸರ್ಜ-ನಮನಾಶ್ರಿತ್ಯಾಪರಿಮೇಯಾಂ ಶಕ್ತಿಂ ಘಟೇತೇತಿ । ತದಿದ-ಮಾಹ ಅನುಮಿತಿಸಿದ್ಧಂ ಕರ್ತಾರಂ ಅಗಣಿತಮಹಿಮ-

---

ವುದಕ್ಕಾಗಿಯೇ ಈ ಪದಪ್ರಯೋಗಮಾಡಿರುತ್ತದೆ. ಹದಿನಾಲ್ಕು ಲೋಕಗಳೂ ಕೂಡ ಅಸಂಖ್ಯಾತವಾದ, ವೈಚಿತ್ರ್ಯವುಳ್ಳ ಅನೇಕ ಕೋಟಿ ಜೀವರಿಂದ ತುಂಬಿ ಇರುತ್ತವೆ. ಹದಿನಾಲ್ಕು ಲೋಕಗಳೂ ಸೇರಿಕೊಂಡು ಊರ್ಧ್ವಾಧಃ ಪ್ರದೇಶಗಳಲ್ಲಿ ಸಂಪುಟಿತವಾಗಿ ಒಂದು ಅಂಡವಾಗಿರುವುದು. ಈ ವಿಧವಾಗಿರುವ ಅಂಡಗಳು ಅನೇಕಕೋಟಿ ಸಂಖ್ಯೆಯುಳ್ಳವುಗಳಾಗಿ ಇರುವುವು. ಇವುಗಳನ್ನು ಸೃಷ್ಟಿಮಾಡಲು ಅಪರಿಮಿತವಾದ ಶಕ್ತಿಯು ಇಲ್ಲದೆ ಆಗುವುದಿಲ್ಲ. ಈ ಪ್ರಕಾರವಾದ ಅಸಂಖ್ಯಾತವಾದ ಅಂಡಗಳ ಸೃಷ್ಟಿಯು ಆಗಿರುವುದರಿಂದ, ಇದನ್ನು ಸೃಷ್ಟಿಮಾಡಿರುವವನಾದ ಕರ್ತನೂ ಅಪರಿಮಿತವಾದ ಮಹಿಮೆಯುಳ್ಳವನೂ ಒಬ್ಬನು ಇರಲೇಬೇಕೆಂದು ಊಹಿಸುವುದೇ ಅನುಮಾನವಾಗಿರುತ್ತದೆ. ಇಲ್ಲಿ ಕಾರಣವಾದ ಕರ್ತೃಪದಾರ್ಥವನ್ನು ಕಾರ್ಯಮೂಲಕವಾಗಿ ತಿಳಿಯಬೇಕು. ಚತುರ್ದಶಲೋಕಾತ್ಮಕವಾದ ಅಂಡಗಳ ಸೃಷ್ಟಿಯು ಅಪರಿಮಿತವಾದ ಮಹಿಮೆಯುಳ್ಳ ಚೇತನಕರ್ತೃಕವಾಗಿರುವುದು. ಈ ದೇವನು ಈ ಬಗೆಯ ಸೃಷ್ಟಿಯನ್ನು ಮಾಡುವಾಗ ಬಹಳ ಮಹಿಮೆ

**ಬೀಜಂ ಭವತಿ। ತಸ್ಮಾನ್ನ ದ್ವಿತೀಯೋಽಸ್ತಿ**

**ಸ್ವಾತ್ಮಮಾಯಾಂ ಸ್ವಶಕ್ತಿಮಿತಿ ವಿಶಿಂಷರ್ಷ। ನನು ಸ ಏವೇತಿ ಏವಕಾರೇಣ ಕರ್ತಾರಮನ್ಯಂ ವ್ಯವಚ್ಛಿನತ್ತಿ। ತನ್ನಾರ್ಥಃ। ತಸ್ಮಾನ್ನ ದ್ವಿತೀಯೋಽಸ್ತಿ ಕಶ್ಚಿದಿತಿ ಕರ್ತಾರಮನ್ಯಂ ವ್ಯವ-ಚ್ಛಿಂದದ್ವಚನಸ್ಯ ಅರ್ಥ ಇತಿ ಬ್ರೂಮೋ ವಿಶೇಷಣಾವಗತೇಃ। ಲೋಕವದ್ಧಿ ಮಹತ್ಕಾರ್ಯಮನೇಕಕರ್ತೃಕಂ ತಾರ್ಕಿಕಾ**

ಯುಳ್ಳ ತನ್ನ ಮಾಯಾಶಕ್ತಿಯನ್ನು ಮುಖ್ಯವಾಗಿ ಉಪಯೋಗಿಸಿರುವನು. "ಸ ಏವ ಕರ್ತಾ" ಎಂದು ನಿರ್ದೇಶಮಾಡಿರುವುದರಿಂದ ಕರ್ತೃವಾದವನು ಇನ್ನೊಬ್ಬನನ್ನು ವ್ಯವಚ್ಛೇದ ಮಾಡಿರುವುದೆಂದು ತಿಳಿಯಬಾರದು. "ತಸ್ಮಾನ್ನದ್ವಿತೀಯೋಽಸ್ತಿ ಕಶ್ಚಿತ್" ಎಂಬ ಶ್ರುತಿಯ ವಚನವ ಅರ್ಥವು "ಈ ದೇವನಿಗಿಂತಲೂ ಬೇರೆಯಾದವನು ಎರಡನೆಯವನು ಇಲ್ಲವು" ಎಂದು ಇರುವುದು. ಈ ದ್ವಿತೀಯಃ ಎಂಬ ವಿಶೇಷಣದಿಂದ ಈ ದೇವನ ಏಕತ್ವವು ಸಿದ್ಧವಾಗಿ, ದ್ವಿತೀಯ ವಸ್ತು ವ್ಯವಚ್ಛೇದವು ಸಿದ್ಧವಾಗುವುದು. ಇದರಿಂದಲೇ ಆ ಲೋಕಗಳ ಮತ್ತು ಬ್ರಹ್ಮಾಂಡಗಳ ಸೃಷ್ಟಿಕರ್ತನು ಇವನಿಗಿಂತಲೂ ಬೇರೆಯಾದವನು ಇಲ್ಲವೇ ಇಲ್ಲ ಎಂದು ಕರ್ತ್ರಂತರ ವ್ಯವಚ್ಛೇದವು ನಿಶ್ಚಿತವಾಗಿರುತ್ತದೆ.

ಲೋಕದಲ್ಲಿ ದೊಡ್ಡದಾದ ಕಾರ್ಯವನ್ನು ಮಾಡುವಾಗ ಬಹಳ ಜನರು ಪ್ರವೃತ್ತರಾಗುವರು. ಎಲ್ಲರೂ ಸೇರಿ ಕೆಲಸಮಾಡುವರು.

**ಅನುಮಿಮೀರನ್ ಏವಕಾರಂ ಚ ಪ್ರಧಾನಭೂತಮನ್ಯಂ ಕರ್ತಾರಂ ವ್ಯವಚ್ಛೇತ್ತಾರಂ ಮನ್ವೀರನ್ । ತನ್ಮಾ ಸ್ಮೈವ-ಮನುಮಿಮತ ಮಾ ಸ್ಮ ಚ ಮನ್ವತ ಇತಿ ವಿಶೇಷಾವಗತೇ-ರ್ಹೇತೋಃ ಅಭ್ಯಾಸೇ ಹಿ ದಾರ್ಢ್ಯಮರ್ಥಸ್ಯಾಭ್ಯಸ್ಯಮಾನಸ್ಯ ಲೋಕತೋಽವಗಚ್ಛಾಮಃ ತನ್ಮಾ ಗ್ರಹೀಷ್ಟ ತಾರ್ಕಿಕ-ರಸಿಕಾಃ ಏವಕಾರಮೌಪಚಾರಿಕಾರ್ಥಕಮಿತಿ । ವಿವಿಚ್ಯಾರ್ಥಂ**

---

ಆದಕಾರಣ ಮಹತ್ಕಾರ್ಯವು ನೆರವೇರಲು ಕರ್ತೃಗಳಾದವರು ಅನೇಕರಿರುವರು. ಆದರೆ ಅವರಲ್ಲಿ ಮುಖ್ಯನಾದವನೊಬ್ಬನಿಗೆ ಮಾತ್ರವೇ ಮುಖ್ಯವಾದ ಕರ್ತೃತ್ವವು ಉಂಟಾಗುವುದು ಎಂದು ತಾರ್ಕಿಕರು ಅನುಮಾನ ಪ್ರಮಾಣದಿಂದ ನಿಶ್ಚಯಮಾಡುತ್ತಾರೆ. ಈ ವಿಧವಾದ ಗೌಣ ಮತ್ತು ಮುಖ್ಯವಾದ ಕರ್ತೃತ್ವವನ್ನು ಹೇಳಿ ಅದರಲ್ಲಿ ವ್ಯವಚ್ಛೇದ್ಯ ವ್ಯವಚ್ಛೇದಕಭಾವವನ್ನು ಹೇಳುವ ತಾರ್ಕಿಕರ ಸಮ್ಮತಿಯನ್ನು ದ್ವಿತೀಯ ಎಂಬ ವಿಶೇಷಣದಿಂದ ನಿರಾಸಮಾಡಿರುತ್ತದೆ. ದ್ವಿತೀಯಃ ಎಂಬ ವಿಶೇಷಣದಿಂದ ತಾರ್ಕಿಕರು ಹೇಳುವುದಕ್ಕಿಂತಲೂ ಅತಿಶಯವಾದ ಅರ್ಥವು ಉಪಸ್ಥಿತವಾಗಿರುವುದು ಆವೃತ್ತಿಯಿಂದ ಅಭ್ಯಾಸಮಾಡುವುದು ಲೋಕದಲ್ಲಿ ದೃಢತ್ವವನ್ನು ಉಂಟುಮಾಡುವುದಕ್ಕಾಗಿಯೇ ಆಗಿರುವುದು. ಒಂದು ವಿಷಯವನ್ನು ಚೆನ್ನಾಗಿ ತಿಳಿಯಬೇಕಾದರೆ ಅದನ್ನು ಅನೇಕಸಾರಿ ಆವೃತ್ತಿಮಾಡುವುದರಿಂದ ಅದರ ಸ್ವರೂಪವು ಚೆನ್ನಾಗಿ ತಿಳಿಯುವುದು. ಇದು ಲೋಕಾನುಭವವಾಗಿರುವುದು. "ಸ ಏವ ಕರ್ತಾ" ಎಂಬ ವಾಕ್ಯಗತವಾದ ಏವಕಾರವನ್ನು ಔಪಚಾರಿಕವಾದ ಅರ್ಥವನ್ನು ಬೋಧಿಸುವುದು ಎಂದು ತಿಳಿಯಬಾರದು.

**ಕಶ್ಚಿತ್ ಸ ನಿರಾಕಾರೋಽಪಿ ಸಾಕಾರತ್ವಂ ವಿಧತ್ತೇ । ನಿರಾಕಾರಸಾಕಾರಾವಸ್ಯ ನೈಸ-**

---

**ಗೃಹ್ಣೀಯುರಧ್ಯೇತಾರ ಇತಿ ಮನ್ತ್ರಾನೋಪನಿಷತ್—ಸ ಸಾಂಬಃ ಉಕ್ತಪ್ರಮಾಣೈರ್ನಿರಾಕಾರೋಽಪೀತಿ ವೃತ್ತ-ಮನುಕೀರ್ತಯತಿ । ಸ್ವತ ಇತಿ ಶೇಷಃ । ವಿಧತ್ತೇ ಪುಷ್ಣಾ-ತೀತ್ಯರ್ಥಃ । ಯದಿ ವಿಧಾನಂ ಉತ್ಪಾದನಂ ಸ್ಯಾತ್ತದೋ-**

---

ಉಪನಿಷತ್ತಿನಲ್ಲಿ ಉಕ್ತವಾಗಿರುವ ಅಭಿಪ್ರಾಯವನ್ನು ಉಪನಿಷತ್ತನ್ನು ತಿಳಿಯಲು ಇಚ್ಛೆಯುಳ್ಳವರು ಅರ್ಥವಿವರಣೆಯ ಮೂಲಕವಾಗಿ ತಿಳಿಯುವರು. ಆದ್ದರಿಂದ ಉಪನಿಷತ್ಪ್ರತಿಪಾದ್ಯನಾದ ಈ ದೇವನು ತಾನು ನಿರಾಕಾರನಾದಾಗ್ಯೂ ಮೇಲೆ ಹೇಳಿರುವ ಪ್ರಮಾಣ ವಚನಗಳಿಂದ ತನ್ನ ಸ್ವರೂಪವನ್ನು ತನ್ನ ಕಾರ್ಯದ ಮೂಲಕವಾಗಿ ವ್ಯಕ್ತಗೊಳಿಸಿರುವನು. "ನಿರಾಕಾರೋಽಪಿ ಸಾಕಾರತ್ವಂ ವಿಧತ್ತೇ" ಎಂಬ ವಾಕ್ಯದಲ್ಲಿ ವಿಧತ್ತೆ ಎಂಬುವ ಪದಕ್ಕೆ ಪುಷ್ಣಾತಿ ಎಂದು ಅರ್ಥವನ್ನು ಹೇಳಿರುತ್ತದೆ. ಇದರಿಂದ ತಾನು ನಿರಾಕಾರನಾದರೂ ಸಾಕಾರನಾಗಿಯೂ ಇರುವನು ಎಂದು ಅಭಿಪ್ರಾಯವು ಇವನು ಸಾಕಾರತ್ವವನ್ನು ವೃದ್ಧಿಮಾಡುವನು ಎಂದು ತಿಳಿಯಬೇಕು.

"ಸಾಕಾರತ್ವಂ ವಿಧತ್ತೆ" ಎಂಬ ವಾಕ್ಯಗತವಾದ ವಿಧತ್ತೆ ಎಂಬ ಪದಕ್ಕೆ "ಉತ್ಪದ್ಯತೆ" ಎಂದು ಅರ್ಥಮಾಡಿ ಉತ್ಪತ್ತಿಯು ವಿಹಿತವಾಗು

ತ್ಪಾದ್ಯಮಾನಘಟಸ್ಯೋತ್ಪತ್ತೇಃ ಪೂರ್ವಂ ಘಟರೂಪಾ-
ಸತ್ತ್ವವದಾಕಾರಸ್ಯಾಸತ್ತ್ವಾಪಾತಃ । ತತಶ್ಚ ನಿರಾಕಾರ-
ಸಾಕಾರಾವಸ್ಯ ನೈಸರ್ಗಿಕೌ ವರ್ತೇತೇ ಇತಿ ಆಕಾರಸ್ಯ ಸ್ವತ-
ಸ್ಸಿದ್ಧತ್ವರೂಪನೈಸರ್ಗಿಕತ್ವವಚನಮುತ್ಪತ್ತ್ಯಭಾವಾಭಿಪ್ರಾ-
ಯಕಂ ಶ್ರೌತಮುಪರುಧ್ಯೇತ, ತಸ್ಮಾತ್ಪುಷ್ಣಾತೀತ್ಯೇವಾರ್ಥಃ।
ತದಿದಮುಕ್ತಂ। ಸಾಂಬಮೂರ್ತಿಃ ಸ ನೋಽವ್ಯಾದಿತಿ ।
ಅಯಮಭಿಸಂಧಿಃ । ನಃ ಅಸ್ಮಾನಿತ್ಯರ್ಥಕಂ ಕೇ ಯೂಯ-

---

ವುದಾದರೆ ಅದು ಶ್ರುತಿಯಲ್ಲಿ ಹೇಳಿರುವ ಅರ್ಥಕ್ಕೆ ವಿರುದ್ಧವಾಗುತ್ತದೆ. ವಿಧಾನವೆಂಬುವುದು ಉತ್ಪಾದನವೆಂದು ಹೇಳುವುದಾದರೆ ಘಟವು ಉತ್ಪತ್ತಿಯಾಗುವುದಕ್ಕಿಂತ ಪೂರ್ವದಲ್ಲಿ ಘಟರೂಪವು ಇಲ್ಲದಿರುವಂತೆ ಆಕಾರವೂ ಕೂಡ ಅಸತ್ತಾಗಿರುವುದೆಂದು ಹೇಳಬೇಕು. ಈ ಕಾರಣ ದಿಂದಲೇ ಈ ದೇವನು ನಿರಾಕಾರನೂ ಸಾಕಾರನೂ ಆಗಿರುವುದು ಇವನ ಸ್ವಭಾವವೆಂದು ಉಕ್ತವಾಗಿರುವುದು. ಸ್ವತಸ್ಸಿದ್ಧವಾದ ಆಕಾರವನ್ನು ಹೊಂದಿರುವಿಕೆಯು ಉತ್ಪತ್ತ್ಯಭಿಪ್ರಾಯಕ್ಕೆ ವಿರುದ್ಧವಾಗಿರುತ್ತದೆ. ಆದ್ದರಿಂದ ವಿಧಾನಂ ಎಂಬ ಪದಕ್ಕೆ ಪುಷ್ಣಾತಿ ಎಂದು ಅರ್ಥವನ್ನು ಅಂಗೀಕರಿಸಿರುತ್ತದೆ. ಇದರಿಂದಲೇ ಈ ದೇವನು ಸಾಂಬಮೂರ್ತಿಯು ಆಕಾರದಿಂದ ಇರುವವನಾಗಿ ನಮ್ಮನ್ನು ರಕ್ಷಿಸಲಿ ಎಂದು ಸಾಕಾರತ್ವ ನಿರ್ದೇಶವಮಾಡಿರುತ್ತದೆ. ನಃ ಎಂಬ ಪದವು ನಮ್ಮನ್ನು ಎಂದು ಅರ್ಥ ವನ್ನು ಬೋಧಿಸುವುದು. ನಃ ಎಂಬ ಪದಕ್ಕೆ ನಮ್ಮನ್ನು ಎಂದು ಅರ್ಥ ವಾದರೆ ನೀವು ಯಾರು ಎಂದು ಪ್ರಶ್ನೆಯು ಉಂಟಾಗುವುದು. ಗುರು

ಮಿತಿ ತದನು ಪರ್ಯನುಯೋಗಃ ಸ್ಯಾತ್ । ಗುರುಸಂಘ ಆಚಾರ್ಯಸಂಘಶ್ಚೇತಿ । ನಾವಿತಿ ದ್ವಿವಚನೇನ ಅವನೀಯಾರ್ಥ-ಮಜಾನೀಮ । ತೇ ವಯಮೇವಂ ಸಮಾದಧೀಯಾಮ, ಅನಾದಿರೇತತ್ಸಂಘದ್ವಯಂ ಗುರೋರವನವತ್ ಶಿಷ್ಯಸ್ಯಾವ-ನಮರ್ಥಯತೇ ದೀಪಕಾಲಂಕಾರವಿಧಯೇತಿ ಶ್ರುತ್ಯರ್ಥ-ಮವೋಚಾಮ । ತನ್ನ ಪ್ರಸ್ಮರ್ತವ್ಯಂ ತತಶ್ಚಾನಾದಿಕಾಲ-ಪ್ರವೃತ್ತಃ ಅವಿತಾ ಸಾಂಬೋಽಪಿ ಸಿಧ್ಯತಿ । ನ ಚ ನಿರಾಕಾರಃ ಸಾಂಬಃ ಸ್ಯಾದಿತಿ ಅನಾದಿತ್ವಂ ಸಾಕಾರಸ್ಯೇತಿ । ಕಿಮರ್ಥಂ ಪುನರಿಹಾಕಾರತದಭಾವಯೋರ್ನೈಸರ್ಗಿಕತಾವಾದಃ । ತಾ-

---

ಸಂಘವೂ ಆಚಾರ್ಯಸಂಘವೂ ಕೂಡ ಯಾರು ಎಂದು ಪ್ರಶ್ನೆಯನ್ನು ಮಾಡಬೇಕಾಗಿರುತ್ತದೆ. ನೌ ಎಂಬ ದ್ವಿವಚನದಿಂದ ರಕ್ಷಣೆಗೆ ಅರ್ಹರು ಎಂಬ ಅರ್ಥವನ್ನು ತಿಳಿಯುತ್ತೇವೆ ಆ ರೀತಿಯಲ್ಲಿ ಪ್ರಸಿದ್ಧರಾದ ನಾವುಗಳು, ಅನಾದಿಯಾದ ಗುರುಸಂಘ, ಆಚಾರ್ಯಸಂಘವೆಂಬ ಎರಡು ಸಂಘಗಳು ತಮ್ಮತಮ್ಮ ರಕ್ಷಣೆಯನ್ನು ಪ್ರಾರ್ಥಿಸುವಹಾಗೆ ಶಿಷ್ಯ ಸಂಘಕ್ಕೂ ರಕ್ಷಣೆಯನ್ನು ಪ್ರಾರ್ಥಿಸುತ್ತಿರುವುದು.

ಪದಾವೃತ್ತಿರೂಪವಾದ ದೀಪಕಾಲಂಕಾರದಂತೆಯೇ ಗುರುವನ್ನೂ ರಕ್ಷಿಸಲಿ, ಶಿಷ್ಯನನ್ನೂ ರಕ್ಷಿಸಲಿ ಎಂಬ ಶ್ರುತ್ಯರ್ಥವನ್ನು ಹೇಳಿರುತ್ತದೆ. ಈ ಗ್ರಂಥದಲ್ಲಿ ಹಿಂದೆಯೇ ಈ ಅರ್ಥವು ಉಕ್ತವಾಗಿರುತ್ತದೆ. ಹೀಗೆ ಹೇಳುವುದರಿಂದ ಕಾಲವು ಅನಾದಿಯಾಗಿ ಪ್ರವರ್ತಿಸುತ್ತಿರುವುದರಿಂದ ರಕ್ಷಣೆಯನ್ನು ಮಾಡುವ ಕ್ರಿಯಾಕರ್ತೃವಾಗಿರುವವನು ಸಾಂಬ

# ಗಿಕೌ ವರ್ತೇತೇ । ಜಗದುದಯಕಾರಣಂ

**ಧ್ಯಕ್ತ್ರಾದ್ಯಗಧಿಕಾರಿಣಾಮನುಗ್ರಹಾಯೇತಿ ವದಾಮಃ । ಕೇಚಿ-
ದ್ಧಿ ಸಾಕಾರಂ ಧ್ಯಾಯೇಯುಃ ಪರೇ ನಿರಾಕಾರಂ ಉಭಯೋ
ಅಪಿ ಅನುಗ್ರಾಹ್ಯಾವಿತಿ । ಭಾವಪ್ರಧಾನೋಽತ್ರ ನಿರ್ದೇಶಃ ।
ಸಾಕಾರನಿರಾಕಾರತ್ವೇ ಅಸ್ಯ ನೈಸರ್ಗಿಕೌ ವರ್ತೇತೇ ಇತಿ ।
ಜಗದುತ್ಪತ್ತಿಪಾಲನಪ್ರಲಯಾಂತಾಃ ಕ್ರಿಯಾಃ ಮಹಾಶಿಲ್ಪ-
ಮುವಗಮಿತಂ । ತಾದೃಶಶಿಲ್ಪನಿಷ್ಪತ್ತಿಕ್ರಮಂ ಕಾರಣಂ
ಚೋಪದೇಷ್ಟುಮಾರಭತೇ । ಜಗದುದಯಕಾರಣಂ ತನ್ಮ-**

ಮೂರ್ತಿಯೇ ಆಗಿರುವನು ಎಂದು ಸಿದ್ಧವಾಗಿರುತ್ತದೆ. ಸಾಂಬ ಮೂರ್ತಿಯು ನಿರಾಕಾರನಾಗಿಯೂ ಸಾಕಾರನಾಗಿಯೂ ಅನಾದಿ ಯಾಗಿಯೂ ಇರುವನು. ಸಾಕಾರನಿರಾಕಾರಗಳ ನೈಸರ್ಗಿಕತ್ವವಾದವು ಆಯಾಯ ಅಧಿಕಾರಿಗಳ ಅನುಗ್ರಹಕ್ಕಾಗಿ ಇರುವುದು. ಕೆಲವರು ಸಾಕಾರವನ್ನು ಧ್ಯಾನಮಾಡುವರು, ಕೆಲವರು ನಿರಾಕಾರವನ್ನು ಧ್ಯಾನ ಮಾಡುವರು. ಇವರಿಬ್ಬರಿಗೂ ಅನುಗ್ರಹವನ್ನು ಮಾಡುವುದಕ್ಕಾಗಿಯೇ ಭಾವಪ್ರಧಾನವಾದ ನಿರ್ದೇಶಮಾಡಿರುವುದು.

ಜಗತ್ತಿನ ಉತ್ಪತ್ತಿ ಪಾಲನ ನಾಶವೇ ಮೊದಲಾದ ಕಾರ್ಯಗಳು ಮಹಾಶಿಲ್ಪಜ್ಞಾನವನ್ನು ಬೋಧಿಸುವುದು. "ಜಗದುದಯಕಾರಣಂ ತನ್ಮನೋಽಜಾಯತ" ಎಂಬ ವಾಕ್ಯದಿಂದ ಆ ಪ್ರಕಾರವಾದ ಶಿಲ್ಪವು

**ನೋ ಜಾಯತ ಇತ್ಯಾದಿನಾ । ನೈಕಕೋಟಿಕೋಟಯೋ ಜೀವಾಃ ಸ್ಥಾವರಾಃ ಕ್ರಿಮಯಃ ಅಬ್ಜಾಃ ಪಕ್ಷಿಣಃ ಪಶವಃ ನರಾಃ ಸಹಸ್ರಪೂರ್ವಾಃ । ಯದ್ಯೇಕೋ ನರಸ್ತರ್ಹಿ ಸಹಸ್ರಂ ಪಶವಃ । ಯದ್ಯೇಕಃ ಪಶುಸ್ತರ್ಹಿ ಸಹಸ್ರಂ ಪಕ್ಷಿಣಃ । ಯದ್ಯೇಕಃ ಪಕ್ಷೀ ತರ್ಹಿ ಸಹಸ್ರಮಬ್ಜಾಃ । ಯದ್ಯೇಕೋ-ಽಬ್ಜಸ್ತರ್ಹಿ ಸಹಸ್ರಂ ಕ್ರಿಮಯಃ । ಯದ್ಯೇಕಃ ಕ್ರಿಮಿಸ್ತರ್ಹಿ ಸಹಸ್ರಂ ಸ್ಥಾವರಾ ಇತಿ ತದರ್ಥಃ । ಯದಾಹುಃ—ಸ್ಥಾವರಾಃ**

---

ಕ್ರಮವಾಗಿ ಉಂಟಾಗುವುದನ್ನೂ ಕಾರಣವನ್ನೂ ಉಪದೇಶಮಾಡಲು ಪ್ರಾರಂಭಮಾಡಿ ಶ್ರುತಿಯು ಬೋಧಿಸುತ್ತದೆ. ಜೀವರು ಅನೇಕ ಕೋಟಿ ಸಂಖ್ಯೆಯುಳ್ಳವರಾಗಿರುವರು. ಇದರಂತೆಯೇ ಕ್ರಿಮಿಗಳು, ಸ್ಥಿರವಾದ ಪ್ರಾಣಿಗಳು, ನೀರಿನಲ್ಲಿ ಬೆಳೆಯುವ ಪ್ರಾಣಿಗಳು, ಪಕ್ಷಿಗಳು, ಪಶುಗಳು, ಮನುಷ್ಯರು ಎಂಬ ಈ ಪ್ರಾಣಿವರ್ಗಗಳೆಲ್ಲವೂ ಸಾವಿರ ಗಟ್ಟಲೆಯಾಗಿ ಉತ್ಪತ್ತಿಯುಳ್ಳವರಾಗಿರುವರು. ಮನುಷ್ಯನು ಒಬ್ಬನು ಇದ್ದಲ್ಲಿ ಸಾವಿರ ಪಶುಗಳು ಇರುವವು. ಪಶುವು ಒಂದು ಇದ್ದಲ್ಲಿ ಸಾವಿರ ಪಕ್ಷಿಗಳು ಇರುವುವು. ಒಂದು ಪಕ್ಷಿಯು ಇರುವಾಗ ಸಾವಿರ ಜಲಚರಪ್ರಾಣಿಗಳು ಇರುವುವು. ಒಂದು ಜಲಚರಪ್ರಾಣಿಯು ಇರುವಾಗ ಸಾವಿರ ಕ್ರಿಮಿಗಳು ಇರುವುವು. ಒಂದು ಕ್ರಿಮಿಯು ಇರುವಾಗ ಸಾವಿರ ಸ್ಥಿರಪ್ರಾಣಿಗಳು ಇರುವುವು ಎಂದು ಅಭಿಯುಕ್ತವಚನವು ಹೇಳುವುದು. ಪಶುಪಕ್ಷಿಕ್ರಿಮಿಸ್ಥಾವರಜಲಚರನರ ಎಂಬ ಪ್ರಾಣಿಗಳ ಗಣನೆಯು ಸಹಸ್ರಪೂರ್ವಕವಾಗಿರುತ್ತದೆ. ಈ ಅರ್ಥವನ್ನೇ—

ಕ್ರಿಮಯೋ ಹ್ಯಬ್ಜಾಃ ಪಕ್ಷಿಣಃ ಪಶವೋ ನರಾಃ । ಸಹಸ್ರ-
ಪೂರ್ವತಸ್ತೇಷಾಂ ಗಣನಾ ಪರಿಕೀರ್ತಿತೇತಿ । ತ ಏತೇ
ಜಗತ್ಪದಾರ್ಥಾಃ । ಪುನಃ ಪುನರ್ನ್ನಾಕರೂಪತದರ್ಥಯೋಗಾತ್।
ತೇಷಾಂ ಚ ಪ್ರಲಯೇ ಸ್ವಕರ್ಮನಿಮಿತ್ತೇ ಜಾತೇ ಯದಾ
ಜಗದುದಯಕರ್ಮೋದ್ಬೋಧಸ್ತದಾ ಸ ಸಾಂಬಮೂರ್ತಿಃ
ಸ್ವಸ್ವರೂಪಾನುಸಂಧಾನಾತ್ಪ್ರಚ್ಯುತಃ ಸ್ಯಾತ್ ತತಶ್ಚೇತಿ ಆದಿ-

---

ಸ್ಥಾವರಾಃ ಕ್ರಿಮಯೋಹ್ಯಬ್ಜಾಃ ಪಕ್ಷಿಣಃ ಪಶವೋ ನರಾಃ ।
ಸಹಸ್ರಪೂರ್ವತಸ್ತೇಷಾಂ ಗಣನಾ ಪರಿಕೀರ್ತಿತಾ ॥

ಎಂಬ ಈ ವಚನವು ಬೋಧಿಸಿರುವುದು. ಈ ವಿಧವಾದ ಪ್ರಾಣಿಗಳನ್ನು ಸೇರಿಸಿದ ಸಮುದಾಯವನ್ನೂ ಪ್ರಾಣಿಗಳಿಗೆ ಆಶ್ರಯವಾಗಿರುವುದನ್ನೂ ಜಗತ್ತೆಂದು ಕರೆಯುತ್ತಾರೆ. ಈ ಪ್ರಾಣಿಗಳು ಉತ್ಪನ್ನರಾದನಂತರ ಇವರ ಸ್ಥಿತಿಯೂ ಆಯಾಯ ಪ್ರಾಣಿಕರ್ಮಗಳಿಗೆ ಅನುಸಾರವಾಗಿರುವುದು. ಜಗತ್ತಿನ ಪ್ರಳಯಕಾಲದಲ್ಲಿ ಮೊದಲು ಈ ಪ್ರಾಣಿಗಳ ನಾಶಕ್ಕನುಸಾರವಾಗಿ ಅವರವರ ಕರ್ಮಗಳು ನಿಮಿತ್ತವಾಗುವುವು. ಪುನಃ ಜಗತ್ತಿನ ಸೃಷ್ಟಿಯು ಉಂಟಾದಾಗ ಆಯಾಯ ಪ್ರಾಣಿಗಳ ಕರ್ಮಗಳು ಉತ್ಪತ್ತಿಗನುಸಾರವಾಗಿ ಉದ್ಬೋಧವಾಗುತ್ತವೆ. ಆಗ ಈ ದೇವನು ತನ್ನ ಸ್ವರೂಪವನ್ನು ಧ್ಯಾನಮಾಡುವುದರಿಂದ ಎಚ್ಚರಗೊಳ್ಳುವನು. ಸಾಂಬಮೂರ್ತಿಯ ಸ್ವಸ್ವರೂಪಪ್ರಜ್ಯೋತಿಯು ಜಗತ್ತಿನ ಉತ್ಪತ್ತಿಗೆ ಕಾರಣವಾದ ಸಂಕಲ್ಪಾವಸ್ಥೆಯಾಗಿರುತ್ತದೆ. ಈ ಅವಸ್ಥೆಯು "ಮನಸ್ಸಂಕಲ್ಪಾತ್ಸರ್ವಂ ಜಗತ್ ಸಂಕಲ್ಪಿತಂ ಭವತಿ" ಎಂದು ಶ್ರುತಿಬೋಧಿತ

**ತನ್ಮನೋ ಜಾಯತೇ। ಮನಸ್ಸಂಕಲ್ಪಾತ್ಸರ್ವಂ ಜಗತ್ಸಂಕಲ್ಪಿತಂ ಭವತಿ। ತದೇವೈವಂ ಪ್ರಾ-**

---

**ಭಾಗೋಽಸ್ಯಾಃ ಶ್ರುತೇರನುಷಂಜನೀಯಃ । ನ ಮನಸಃ ಸ್ವರೂಪತ ಉತ್ಪತ್ತಿಃ ಅಪಿ ತರ್ಹಿ ಜಗದುದಯಕಾರಣ-ತಯಾವಸ್ಥಾನಮಿತ್ಯರ್ಥಃ । ಕೀದೃಶೀ ಸಾವಸ್ಥೇತಿ ಜಿಜ್ಞಾ-ಸಾಯಾಮಾಹ । ಮನಸ್ಸಂಕಲ್ಪಾತ್ಸರ್ವಂ ಜಗತ್ಸಂಕಲ್ಪಿತಂ ಭವತೀತಿ । ತದಿಚ್ಛಯೈವ ಸರ್ವಂ ಜಗತ್ಸೃಷ್ಟಂ ಭವತೀ-ತ್ಯರ್ಥಃ । ಯಾ ಹಿ "ಸರ್ವಂ ಜಗತ್ಕರೋಮೀತಿ" ಮಾನಸೀ ವೃತ್ತಿಃ ಸಾ ಸಂಕಲ್ಪಃ । ಸೈಷಾ ಪುನರಿಚ್ಛಾಂ ವಿನೋತ್ಪದ್ಯತ ಇತಿ ತದಭಿಸಂಧಿಃ । ಜ್ಞಾನಂ ಇಚ್ಛಾ ತದನುಸಂಕಲ್ಪ ಇತಿ**

---

ವಾಗಿರುವುದು. ಮನಸ್ಸೆಂಬುವುದಾಗಿ ಪ್ರತ್ಯೇಕವಾದ ಸ್ವರೂಪದಿಂದ ಮನಸ್ಸಿನ ಉತ್ಪತ್ತಿಯು ಇರುವುದಿಲ್ಲ ಎಂದು ತಿಳಿಯಬೇಕು. ಸಾಂಬ ಮೂರ್ತಿಯು ಸ್ವಸ್ವರೂಪಾನುಸಂಧಾನದಿಂದ ಪ್ರಚ್ಯುತಾವಸ್ಥೆಯು ಜಗ ದುದಯಕಾರಣರೂಪದಿಂದ ಇರುವುದು. ಸಾಂಬಮೂರ್ತಿಯು ಇಚ್ಛೆ ಯಿಂದಲೇ ಜಗತ್ತೆಲ್ಲವೂ ಸೃಷ್ಟವಾಗಿರುವುದು. ಜಗತ್ತೆಲ್ಲವನ್ನೂ ನಿರ್ಮಿ ಸುವೆನು ಎಂಬ ಮನಸ್ಸಿನ ವೃತ್ತಿಯು ಇಚ್ಛೆಯಿಲ್ಲದೆ ಉಂಟಾಗುವುದಿಲ್ಲ. ಆದ್ದರಿಂದ ಇಚ್ಛಾಪೂರ್ವಕವೃತ್ತಿಯು ಸಂಕಲ್ಪವೆನಿಸಿರುತ್ತದೆ. ಮೊದಲು ಪ್ರಪಂಚವನ್ನು ಸೃಷ್ಟಿಸಬೇಕೆಂದು ಸಾಮಾನ್ಯವಾಗಿ ಒಂದು ಜ್ಞಾನವು ಉಂಟಾಗುವುದು. ಅನಂತರ ಅದು ದೃಢವಾಗಿ ಇಚ್ಛೆಯೆನಿಸುವುದು.

**ಕ್ರಮಾತ್ಸರ್ವಂ ಜಗತ್ ಸಮ್ಯಕ್ಕಲ್ಪಿತಂ ಭವತೀತಿ ಚ ಸಮ್ಯ-ಕ್ಕೃತಂ ಭವತೀತಿ ಬೋಧಾತ್ । ಯ ಏಷ ಸಂಕಲ್ಪೋ ನೈಕಶ್ರುತಿವೇದಿತೋಽಯಂ ಸಾಂಬಸ್ಯ ಜಗಚ್ಛಿಲ್ಪಕ್ರಮ ಇತಿ ನಿದರ್ಶಯಿತುಂ ಕಾಚಿಚ್ಛ್ರುತಿಃ ಪ್ರದರ್ಶ್ಯತ ಇತ್ಯಾಹ। ತದೇನ್ವೈವಂ ಜಗಚ್ಛಿಲ್ಪಂ ಪ್ರಾರಭ್ಯತ ಇತಿ । ಯಚ್ಛಿಲ್ಪ-ಮುಪಕ್ರಾಂತಂ ತದೇವ । ಏವಂ ಅತ್ರ ಶ್ರುತಾವುಕ್ತಪ್ರಕಾ-ರೇಣೈವ ಪ್ರಾರಭ್ಯತೇ । ಶ್ರುತ್ಯಂತರೇಽಪೀತಿ ಶೇಷೋಽನು-**

---

ಅದೇ ಇನ್ನೂ ದೃಢವಾಗಿ ಸಂಕಲ್ಪವೆಸಿಕೊಂಡು ಕಾರ್ಯವೆಲ್ಲವನ್ನೂ ನಿರ್ವಹಿಸುವುದು. ಹೀಗೆಯೇ ಸಾಂಬಮೂರ್ತಿಯು ತನ್ನ ಮನಸ್ಸಿನ ವೃತ್ತಿ, ಜ್ಞಾನ, ಇಚ್ಛಾ ಸಂಕಲ್ಪಗಳಿಂದ ಜಗತ್ತೆಲ್ಲವನ್ನೂ ಚೆನ್ನಾಗಿರುವಂತೆ ಕಲ್ಪಿಸಿರುವನು. ಇದರಿಂದಲೇ ಜಗತ್ತು ಚೆನ್ನಾಗಿ ಸೃಷ್ಟಿಮಾಡಲ್ಪಟ್ಟಿರುವುದು ಎಂದು ತಿಳಿಯಬೇಕು.

ಈ ಪ್ರಕಾರವಾದ ಸಂಕಲ್ಪವು ಒಂದು ಶ್ರುತಿಯಿಂದಲೇ ತಿಳಿಯಲಶಕ್ಯವಾಗಿರುತ್ತದೆ. ಆದ್ದರಿಂದ ಅನೇಕ ಶ್ರುತಿಗಳಿಂದ ಸಾಂಬನು ನಿರ್ಮಿಸಿರುವ ಜಗಚ್ಛಿಲ್ಪಕ್ರಮವನ್ನು ತಿಳಿಯಬೇಕಾಗಿರುತ್ತವೆ. ಈ ಅಭಿಪ್ರಾಯದಿಂದಲೇ ಇಲ್ಲಿ ಒಂದು ಶ್ರುತಿಯು ನಿರ್ದೇಶಮಾಡಲ್ಪಟ್ಟಿರುವುದು. ಶಿಲ್ಪವು ಉಪಕ್ರಾಂತವಾದ ಕಾಲದಲ್ಲಿಯೇ ಜಗಚ್ಛಿಲ್ಪವು ಈ ಪ್ರಕಾರದಿಂದ ಪ್ರಾರಂಭಿಸಲ್ಪಟ್ಟಿರುತ್ತದೆಯೆಂದೂ ಇಲ್ಲಿ ನಿರ್ದೇಶ ಮಾಡಿರುವ ಪ್ರಕಾರದಂತೆಯೇ ಇತರ ಶ್ರುತಿಗಳಲ್ಲಿಯೂ ಉಕ್ತವಾಗಿರು

ರಭ್ಯತೇ ಜಗಚ್ಛಿಲ್ಪಂ । ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನಿಷಸಾದ

ಷಂಜನೀಯಃ । ಕಾ ಸಾ ಶ್ರುತಿಃ ? ತಾಮಾಹ ಯ ಇಮೇತಿ । ಯಃ ಋಷಿಃ ಜಾನನ್ ತತ್ತತ್ಕರ್ಮಾನುಗುಣಜೀವಭೋಗ್ಯ-ಫಲಜಾತಮಿತಿ ಜ್ಞಾನಕರ್ಮ । ನಃ ಪಿತಾ = ಪಾತೇ ರ್ಡಿತೃಚ್‌ಪ್ರತ್ಯಯಾಂತಶಬ್ದತ್ವಾತ್ಪಾತೇತ್ಯರ್ಥಃ । ತೇನ ಚೋತ್ಪತ್ತಿಪ್ರಲಯಾವಪ್ಯುಪಲಕ್ಷಣೀಯೌ । ಇಮಾನಿ ವಿಶ್ವಾನಿ ಭುವನಾನಿ ಜುಹ್ವತ್ = ಆದದಾನಃ ಗೃಹ್ಣಾನಃ

ವುದು ಎಂದೂ ತಿಳಿಯಬೇಕು. "ಯ ಇಮೇ" ಎಂಬುದಾಗಿ ಆ ಶ್ರುತಿಯು ನಿರ್ದಿಷ್ಟವಾಗಿರುತ್ತದೆ. ಆಯಾಯ ಕರ್ಮಗಳಿಗೆ ಅನುಗುಣ ವಾಗಿರುವ ಜೀವಭೋಗ್ಯವಾದ ಫಲಸಮೂಹವು ಜ್ಞಾನಕರ್ಮಗಳಾಗಿರು ತ್ತವೆ. ಪಾಪಾಲನೇ ಎಂಬ ಪಾಲನಾರ್ಥಕವಾದ ಪಾ ಧಾತುವಿಗೆ ಡಿತೃಜ್ ಪ್ರತ್ಯಯವು ಬಂದಿರುವುದರಿಂದ ಪಾತಾ ಎಂದು ಶಬ್ದರೂಪ ವಾಗುವುದು. ಈ ಶಬ್ದದಿಂದ ಪಾಲಕನು ಎಂದು ಅರ್ಥವಾಗುತ್ತದೆ. ಪಾಲಕನೆಂಬ ಅರ್ಥದ ಜೊತೆಯಲ್ಲಿ ಉಪಲಕ್ಷಣದ ರೀತಿಯಿಂದ ಉತ್ಪತ್ತಿಪ್ರಲಯಗಳು ಗೃಹೀತವಾಗುವುವು. ಜಗತ್ತಿನ ಉತ್ಪತ್ತಿಸ್ಥಿತಿ ಪ್ರಲಯಗಳನ್ನು ಆಚರಿಸುವ ಸಾಂಬಮೂರ್ತಿಯು ಆಯಾಯ ಪ್ರಾಣಿ ಗಳು ಅನುಭವಿಸಬೇಕಾಗಿರುವ ಕರ್ಮಫಲವನ್ನು ಅವರವರಿಗೆ ಅನುಗ್ರ

ಪಿತಾ ನಃ । ಸ ಆಶಿಷಾ ದ್ರವಿಣಮಿಚ್ಛ-
ಮಾನಃ ಪರಮುಚ್ಛದೋ ವರ ಆ ವಿವೇಶ ।

---

**ಅನುಗೃಹ್ಣಾನಃ । ನಿಷಸಾದ = ಪ್ರಾಣಿಕರ್ಮಚೋದಿತಃ ಸರ್ಗ**
**ಜಗತ್ಸರ್ಜನಾಯ ಸ್ವಸ್ವರೂಪಾನುಸಂಧಾನಾದ್ವಿರಮ್ಯ ಅವಾ-**
**ಸ್ಥಿತ । ಸ ಸರ್ವಂ ಜಗತ್ಸೃಷ್ಟ್ವಾ ತೇಷು ಪ್ರಾಣಿಷು ಮಧ್ಯೇ**
**ಭಕ್ತೈತಮ್ಮೈದೀರ್ಯಮಾನಂ ದ್ರವಿಣಂ ಹವಿರಾದಿಕಮಿಚ್ಛ-**
**ಮಾನಃ ಪರಮಸ್ಯ ಸ್ವಸ್ವರೂಪಸ್ಯ ನಿರುಪಾಧಿಕಸ್ಯ ಛದಃ**

---

ಹಿಸುವನು, ಆಯಾಯ ಪ್ರಾಣಿಗಳ ಜ್ಞಾನಕರ್ಮಗಳಿಗನುಸಾರವಾಗಿ ಪ್ರಪಂಚದಲ್ಲಿ ಸೃಷ್ಟಿಯಾಗಬೇಕಾಗಿರುವ ಪ್ರಾಣಿಗಳ ಜ್ಞಾನಕರ್ಮಗಳನ್ನು ಜಗತ್ಸೃಷ್ಟಿಗೋಸ್ಕರವಾಗಿ ಸ್ವೀಕರಿಸುವನು. ತಾನು ಮಾತ್ರ ತನ್ನ ಸ್ವಸ್ವರೂಪಾನುಸಂಧಾನದಿಂದ ವಿಶ್ರಾಂತಿಯನ್ನು ಹೊಂದಿ ಆಯಾಯ ಪ್ರಾಣಿಗಳ ಜ್ಞಾನಕರ್ಮಗಳ ಮೂಲಕವಾಗಿ ಅವರವರನ್ನು ಸೃಷ್ಟಿಮಾಡುವನು. ಹೀಗೆಯೇ ಪ್ರಪಂಚವೆಲ್ಲವನ್ನೂ ನಿರ್ಮಿಸುವನು. ಜಗತ್ತೆಲ್ಲವನ್ನೂ ಸೃಷ್ಟಿಮಾಡಿದ ಈ ಸಾಂಬಮೂರ್ತಿಯು ಆಯಾಯ ಪ್ರಾಣಿಗಳಲ್ಲಿ ತನ್ನ ಭಕ್ತರಾದವರು ಭಕ್ತಿಯಿಂದ ತನಗೆ ಒಪ್ಪಿಸುವ ಹವಿಸ್ಸೇ ಮೊದಲಾದವುಗಳನ್ನು ಸ್ವೀಕರಿಸುವನು ಮತ್ತು ಈ ದೇವನು ಸೃಷ್ಟಿಮಾಡುವ ಕಾಲದಲ್ಲಿ ಈ ಸೃಷ್ಟಿಕಾರ್ಯವನ್ನು ಆಚರಿಸುವುದಕ್ಕಾಗಿಯೇ ತನ್ನ ಸ್ವಸ್ವರೂಪವಾದ ನಿರುಪಾಧಿಕವಾದ ಆಕಾರವನ್ನು

ಛಾದಕಂ ಅಚ್ಛಾದಕಂ ಉಪಾಧಿಮಾವಿವೇಶ । ಕೇನ ಕಾರ-
ಣೇನ? ತದಾಹ ಆಶಿಷೇತಿ । ಭಕ್ತಾನುಗ್ರಹಕಾಮನಯೇತಿ
ತದರ್ಥಃ । ನನು ವರ ಇತಿ, ಹೋತೇತಿ ಕಃ ಪದಾರ್ಥಃ?
ವ್ರಿಯಮಾಣಃ ಸ್ಪರ್ಧಮಾನಶ್ಚೇತಿ । ಕಥಂ ಕೃತ್ವಾ?
ಪ್ರಾರ್ಥನಾರೂಪವರಣಾರ್ಥಸ್ಯ ವೃಧಾತೋರಚ್‌ಪ್ರತ್ಯಯಸ್ಯ
ಕರ್ಮಾರ್ಥಸ್ಯಾವಗಮಾದಿತಿ । ಹ್ವೇಇ್ ಧಾತೋಃ ಸ್ಪರ್ಧಾ-
ರ್ಥಸ್ಯ ತೃಚ್‌ಪ್ರತ್ಯಯಾಂತಸ್ಯ ಛಾಂದಸಂ ರೂಪಂ ಇತಿ ಚ

---

ಮುಚ್ಚುವುದಾಗಿರುವ ಉಪಾಧಿಯನ್ನು ಹೊಂದಿರುವನು. ಭಕ್ತರಿಗೆ
ಅನುಗ್ರಹವನ್ನು ಮಾಡಬೇಕೆಂಬ ಇಚ್ಛೆಯಿಂದಲೇ ಈ ಪ್ರಕಾರವಾದ
ಉಪಾಧಿಯನ್ನು ಅಂಗೀಕರಿಸಿರುವನು. ಈ ಶ್ರುತಿಯಲ್ಲಿ ವರ ಎಂಬ
ಶಬ್ದವೂ, ಹೋತಾ ಎಂಬ ಶಬ್ದವೂ ಇರುವುದು. ವರ ಎಂಬ ಶಬ್ದಕ್ಕೆ
ವ್ರಿಯಮಾಣಃ ಎಂದು ಅರ್ಥವು. ಹೋತಾ ಎಂಬ ಶಬ್ದಕ್ಕೆ ಸ್ಪರ್ಧಮಾನಃ
ಎಂದು ಅರ್ಥವೂ ಆಗುತ್ತದೆ. ವ್ರಿಯಮಾಣಃ ಎಂಬ ಪದದಿಂದ
ಪ್ರಾರ್ಥನೆಯು ಬೋಧಿತವಾಗಿರುತ್ತದೆ. ವೃಇ್ ಧಾತುವು ಪ್ರಾರ್ಥನೆ
ಎಂಬ ಅರ್ಥವನ್ನು ಬೋಧಿಸುವುದು. ಈ ಧಾತುವಿಗೆ ಕರ್ಮಾರ್ಥದಲ್ಲಿ
ಅಚ್ ಪ್ರತ್ಯಯವು ಬಂದು ಈ ರೂಪವಾಗಿರುತ್ತದೆ. "ಹ್ವೇಇ್
ಸ್ಪರ್ಧಾಯಾಂ ವಾಚಿ" ಎಂಬ ಸ್ಪರ್ಧಾರ್ಥಕವಾದ ಹ್ವೇಇ್ ಧಾತುವಿಗೆ
ತೃಚ್ ಪ್ರತ್ಯಯವು ಬಂದು ಇರುವುದರಿಂದ ಹೋತಾ ಎಂದು ರೂಪವು
ಆಗಿರುವುದು. ಇದು ವೈದಿಕಕ್ರಿಯೆಯಿಂದ ಛಾಂದಸವಾದ ರೂಪ
ವಾಗಿರುತ್ತದೆ. ಹೋತಾ ಎಂಬುವುದರಿಂದ ಸ್ಪರ್ಧಮಾನಃ ಎಂದು

**ಕೃತ್ವೇತಿ ಬ್ರೂಮಃ । ನೈವಂ ಸಂಭವತಿ ಸ್ಪರ್ಧಮಾನ ಇತಿ । ಕಿಂ ಕಾರಣಂ? ನಿರ್ಮಲಃ ಸಾಂಬ ಇತಿ । ಮಲಂ ಚ ಸ್ಪರ್ಧಾನಾಮೇತಿ । ಸಂಭವತ್ಯೇವೇತಿ ಬ್ರೂಮಃ । ಕಥಮಿದ-ಮವಗಮ್ಯತಾಂ? ವರ ಇತಿ ವಿಶೇಷಣಂ ವಿಮೃಶ್ಯ । ನ ಸ್ವತಃ ಸ್ಪರ್ಧತೇ ಸಾಂಬಃ । ಅಪಿ ತರ್ಹಿ ಭಕ್ತೈರ್ವ್ರಿಯ-ಮಾಣಃ ಅರ್ಥ್ಯಮಾನಃ ಸನ್ನಿತಿ ವಿಮರ್ಶಾತ್ । ಇದ-ಮತ್ರಾಕೂತಂ—ನ ಸ್ವಮನೀಷಯಾ ವೇದಾರ್ಥೋಽವ-ಗಂತವ್ಯಃ । ಅಪಿ ತರ್ಹಿ ಇತಿಹಾಸಪುರಾಣಾದ್ಯುಪಬೃಂಹ-ಣಾತ್ । ತಥಾ ಚ ಯದಾ ಯದಾ ತ್ರಿಪುರಾದಯಃ ಬಾಧಂತೇ, ಬಾಧ್ಯಮಾನಾಶ್ಚ ಸಾಂಬಮೇವೈಕಂ ಶರಣೇ-**

---

ಅರ್ಥವಾಗುತ್ತದೆ. ಸ್ಪರ್ಧೆ ಎಂಬುವುದು ಮನಸ್ಸಿನ ದೋಷವಾಗಿರುವ ಕಾರಣ ಈ ದೇವನಿಗೆ ಸ್ಪರ್ಧೆಯು ಸ್ವಭಾವದಿಂದ ಇರುವುದಿಲ್ಲವೆಂದು ಹೇಳಬೇಕು. ಎಲ್ಲರಿಗೂ ಅನುಗ್ರಹಮಾಡುವ ಸ್ವಭಾವವುಳ್ಳವನಾದ ಕಾರಣ ಇವನು ವರನಾಗಿರುವನು. ಆದರೆ ಭಕ್ತರ ಇಚ್ಛಾನುಸಾರವಾಗಿ ವರನಾಗಿರುವವನಾದರೂ ಸ್ಪರ್ಧೆಯನ್ನು ಮಾಡುವನು ಎಂದು ವಿಮರ್ಶೆ ಯಿಂದ ತಿಳಿಯಬೇಕು. ವೇದಾರ್ಥವನ್ನು ತಿಳಿಯಲಿಚ್ಛೆಯುಳ್ಳವನು ತನ್ನ ಬುದ್ಧಿಯ ನಿಪುಣತೆಯಿಂದ ಮಾತ್ರವೇ ತಿಳಿಯಬಾರದು. ಇತಿಹಾಸ ಪುರಾಣಗಳ ಉಪಬೃಂಹಣೆಯಿಂದಲೇ ವೇದಾರ್ಥವನ್ನು ನಿಶ್ಚಯಮಾಡ ಬೇಕು. ಭಕ್ತರಾದವರು ತ್ರಿಪುರರೇ ಮೊದಲಾದ ರಾಕ್ಷಸರ ಬಾಧೆಗೆ ಒಳಗಾಗಿ ಅವರ ಬಾಧೆಯನ್ನು ತಡೆಯಲಾರದೆ ಈ ದೇವನನ್ನು ಶರಣು

**ಕೃತ್ಯ ಯಾಚಂತೇ, ಕಾಲಕೂಟವಿಷಾದಯೋ ವಾ ತದಸು ತಾನನುಗೃಹ್ಣಾನಃ ತಚ್ಛತ್ರುಭಿಃ ಸ್ಪರ್ಧತೇ ಸಾಂಬ ಇತಿ । ನನು ಸರ್ವಭಕ್ತಾನುಗ್ರಹಾಯ ವೇದಃ ಪ್ರವೃತ್ತಃ । ಯೇ ಪುನರ್ಭಕ್ತಾ ನ ಬಾಹ್ಯಶತ್ರುಭಿರ್ಬಾಧ್ಯಂತೇ ತದನುಗ್ರಹಾ-ರ್ಥತಾನ್ನೈವಮರ್ಥಾಂಗೀಕಾರೇ ಸ್ಯಾದಿತಿ ಚೇನ್ನ । ತೇಷ್ವಪಿ ಕಾಮಾದಿಶತ್ರುಭಿರ್ಬಾಧ್ಯಮಾನೇಷು ಸಾಂಬಾನುಗ್ರಹಸಂ-ಭವಾತ್ । ಅಸಂಭವೋಽನ್ಯೋನ್ಯಸಂಶ್ರಯಾತ್ । ಈದೃ-ಶೋಽನುಗ್ರಹೋ ನ ಸಂಭವತೀತಿ ಬ್ರೂಮಃ । ಕಿಂ**

---

ಹೊಂದುವರು. ಇವರಂತೆಯೇ ಕಾಲಕೂಟವಿಷವೇ ಮೊದಲಾದವುಗಳ ಬಾಧೆಯಿಂದಲೂ ತನ್ನನ್ನು ಶರಣುಹೊಂದಿರುವ ಭಕ್ತರನ್ನು ಅನುಗ್ರಹಿ ಸುವುದಕ್ಕಾಗಿ ಈ ದೇವನು ಭಕ್ತರಿಗೆ ತೊಂದರೆಯನ್ನುಂಟುಮಾಡುವ ತ್ರಿಪುರರೇ ಮೊದಲಾದವರ ಸಂಗಡ ಸ್ಪರ್ಧೆಮಾಡುವನು. ಭಕ್ತರಾದವ ರೆಲ್ಲರ ಅನುಗ್ರಹಕ್ಕಾಗಿ ವೇದವು ಪ್ರವೃತ್ತವಾಗಿರುವುದು ಮತ್ತು ಭಕ್ತ ರಾದವರನ್ನು ಬಾಹ್ಯಶತ್ರುಗಳು ಬಾಧಿಸಲಾರರು. ಆದಕಾರಣ ಭಕ್ತ ರನ್ನು ಈ ದೇವನು ಅನುಗ್ರಹಮಾಡಬೇಕಾಗಿಲ್ಲ ಎಂದು ಅರ್ಥವನ್ನು ಹೇಳಬಾರದು. ಭಕ್ತರಾದವರಿಗೂ ಕೂಡ ಕಾಮವೇ ಮೊದಲಾದ ಶತ್ರುಗಳ ಬಾಧೆಯು ಉಂಟಾಗಿ ಅದನ್ನು ಸಾಂಬಮೂರ್ತಿಯೇ ಪರಿಹರಿ ಸುತ್ತಿರುವನು. ಹೀಗೆ ಕಾಮಾದಿ ದೋಷಗಳ ಪರಿಹಾರವೇ ಭಕ್ತರ ಅನುಗ್ರಹವಾಗಿರುವುದು.

ಕಾರಣಂ ? ಅನ್ಯೋನ್ಯಸಂಶ್ರಯಃ । ಕಾಮಾದಿಮಲಾಪಾ-
ಕರಣನಿರತ ಇತಿ ಉಪನಿಷತ್ಪದಘಟಿತನಿಪದಾರ್ಥೋ
ವರ್ಣಿತಃ ಸ ನ ಪ್ರಸ್ಮರ್ತವ್ಯಃ । ತತಶ್ಚ ನಿರ್ಮಲಸ್ವಾಂತಾ-
ಯೋಪದಿಶತಿ ಆಚಾರ್ಯಮೂರ್ತಿಸ್ಥಃ ಸಾಂಬ ಇತ್ಯನ-
ಗತಂ । ಭವತಾ ತು ಪ್ರಿಯಮಾಣಃ ಮಲಂ ಕಾಮಾದಿಕಂ
ಸ್ಪರ್ಧಮಾನೋ ಬಾಧತೇ ಸಾಂಬ ಇತಿ ವರ್ಣಿತಂ । ತತಶ್ಚ
ಕಾಮಾದಿರಾಹಿತ್ಯೇ ಸಾಂಬಾನುಗ್ರಹಃ ತದನುಗ್ರಹೇ ಚ
ತದ್ರಾಹಿತ್ಯಮಿತಿ ಅನ್ಯೋನ್ಯಸಂಶ್ರಯಾನ್ನಾಯಮರ್ಥಃ

---

ಕಾಮವೇ ಮೊದಲಾದ ಚಿತ್ತದೋಷಗಳನ್ನು ಪರಿಹಾರಮಾಡು ವುದರಲ್ಲಿ ಸಾಂಬಮೂರ್ತಿಯಾದ ಈ ದೇವನು ನಿರತನಾಗಿರುವನು ಎಂದು ಉಪನಿಷತ್ಪದದಲ್ಲಿರುವ ನಿ ಎಂಬ ಪದಕ್ಕೆ ಅರ್ಥವನ್ನು ವರ್ಣಿಸಿರುವುದು. ಇದರಿಂದ ನಿರ್ಮಲವಾದ ಮನಸ್ಸುಳ್ಳವನಿಗೆ ಗುರುಮೂರ್ತಿಯು ಆಕಾರಗತನಾಗಿ ಉಪದೇಶವನ್ನು ಮಾಡುತ್ತಿರುವನು ಎಂದು ಶ್ರುತಿಯು ಬೋಧಿಸುವುದು. ಇದರಿಂದ ಕಾಮವೇ ಮೊದಲಾದ ಚಿತ್ತದೋಷಗಳು ಸಾಂಬಮೂರ್ತಿಯು ಸ್ಪರ್ಧೆಮಾಡುವ ವಿಷಯವಾಗಿರುವುದು. ಈ ಕಾಮಾದಿ ಮಲಗಳನ್ನು ಬಾಧಿಸುವುದೇ ಸಾಂಬಮೂರ್ತಿಯು ವರವಾಗಿರುವುದರಿಂದ, ಕಾಮಾದಿಗಳು ಇಲ್ಲದಿರುವುದೇ ಸಾಂಬಮೂರ್ತಿಯ ಅನುಗ್ರಹವು. ಸಾಂಬಮೂರ್ತಿಯ ಅನುಗ್ರಹವೇ ಕಾಮಾದಿಗಳು ಇಲ್ಲದಿರುವುದು ಎಂದು ಅನ್ಯೋನ್ಯಾಶ್ರಯದೋಷವು

**ಸಂಭವತೀತಿ ಚೇನ್ನ ಅನ್ಯತಃ ಪರಿಚ್ಛೇದಾತ್ । ಯಾವ-ದ್ಯಾವಲ್ಲೇಶಲೇಶತಃ ಪ್ರಾಕ್ಕರ್ಮಾನುಗುಣಂ ಮಲಮುಪ-ಗಚ್ಛೇತ್ತಾವತ್ತಾವದ್ಭಗವಂತಮರ್ಥಯೇತ, ತತೋಽನು-ಗ್ರಹಃ ತತೋಽಧಿಕಂ ಮಲಾಮುಪಗಮಃ, ತತಸ್ತದರ್ಥನಾ, ತತೋಽಪಿ ಅಧಿಕಂ ಮಲಾಪಗಮ ಇತಿ ಅನ್ಯತಃ = ಪ್ರಕಾ-ರಾಂತರೇಣ, ಪರಿಚ್ಛೇದಾತ್ = ಏತದಾಶಂಕಾಸಮಾಧಾ - ನಾತ್ । ತದಿದಮಾಹ ಭಗವಾನ್ ದ್ವೈಪಾಯನಃ । ಧರ್ಮ-ಮೇಘಮಿಮಂ ಪ್ರಾಹುಃ ಸಮಾಧಿಂ ಯೋಗವಿತ್ತಮಾಃ ।**

---

ಪ್ರಸಕ್ತವಾಗಿರುವುದು. ಆದ್ದರಿಂದ ಹೀಗೆ ಅರ್ಥವನ್ನು ಹೇಳುವುದು ಉಚಿತವಲ್ಲವೆಂದು ಹೇಳಬಾರದು.

ಜನ್ಮಾಂತರ ಕರ್ಮಗಳ ಅನುಗುಣವಾಗಿ ಅಲ್ಪವಾದ ಪ್ರಮಾಣ ದಿಂದ ಕ್ರಮವಾಗಿ ಚಿತ್ತಮಲವು ನಾಶವಾಗುತ್ತಾಬರುವುದು. ಅದನ್ನು ಅನುಸರಿಸಿಯೇ ಸಾಂಬನನ್ನು ಪ್ರಾರ್ಥನೆ ಮಾಡುವುದು. ಅದರಿಂದ ಈ ದೇವನ ಅನುಗ್ರಹವು ಉಂಟಾಗುವುದು. ಅದರಿಂದ ಚಿತ್ತದೋಷವು ಅಧಿಕವಾಗಿ ನಾಶವಾಗುವುದು. ಅನಂತರ ಆಯಾಯ ಇಚ್ಛಾನುಗುಣ ವಾಗಿ ಈ ದೇವನನ್ನು ಪ್ರಾರ್ಥಿಸುವುದು. ಅದರಿಂದ ಅತಿಶಯವಾಗಿ ಚಿತ್ತದೋಷವು ನಾಶವಾಗುವುದು ಎಂಬ ಕ್ರಮದಿಂದ ಪ್ರಕಾರಾಂತರವಾಗಿ ಈ ಅನ್ಯೋನ್ಯಾಶ್ರಯದೋಷವು ಪರಿಹೃತವಾಗುವುದು ಎಂದು ಸಮಾ ಧಾನವನ್ನು ಹೇಳಿರುತ್ತದೆ. ಈ ಅಭಿಪ್ರಾಯವನ್ನು ಪೂಜ್ಯನಾದ ವ್ಯಾಸ ಋಷಿಯು ಧರ್ಮಮೇಘಸಮಾಧಿಯೆಂದು ಬೋಧಿಸಿರುವನು.

**ವರ್ಷತ್ಯೇಷ ಯತೋ ಧರ್ಮಾಮೃತಧಾರಾಃ ಸಹಸ್ರಶ ಇತಿ । ತದಿದಮುಕ್ತಂ ಸಂಗ್ರಹಸೂಕ್ತೌ । ಭವತತಿಜನಿತಾನೇಕ-ಕರ್ಮಾನುರೂಪಂ ವಿಜ್ಞಾನಂ ದಿತ್ಸುರೇಭ್ಯ ಇತಿ ನಿರ್ದೇಶೇನ ಇತಿ । ಉಪಪದ್ಯತೇ ಚ । ಯದಿ ಅತಿಸ್ವಚ್ಛಚಿತ್ತಾಯೈ-ವೋಪದಿಶತೀತ್ಯಭಿಮನ್ಯೇಥಾಸ್ತರ್ಹಿ ಉಪದೇಶಾನುಪದ-ಮೇವ ಜ್ಞಾನಂ ಲಭೇತೇತಿ ಪ್ರಾಪ್ನೋತಿ ಮೋಕ್ಷಂ, ನ**

---

ಮೇಘವು ಮಳೆಯ ನೀರನ್ನು ಸುರಿಸುವಂತೆ ಈ ಸಮಾಧಿಯು ಧರ್ಮಗಳನ್ನು ಎಲ್ಲರಿಗೂ ಹಿತಕರವಾಗಿರುವಹಾಗೆ ಆಚರಿಸುವ ಚಿತ್ತಸ್ಥೈರ್ಯವನ್ನು ಕೊಡುವುದು. ಆದ್ದರಿಂದಲೇ ಯೋಗಾಭ್ಯಾಸ ಮಾಡುವುದರಲ್ಲಿ ನಿಪುಣರಾದವರು ಇದನ್ನು ಧರ್ಮಮೇಘವೆಂದು ಕರೆಯುವರು.

**ಧರ್ಮಮೇಘಮಿಮಂ ಪ್ರಾಹುಸ್ಸಮಾಧಿಂ ಯೋಗವಿತ್ತಮಾಃ ।
ವರ್ಷತ್ಯೇಷ ಯತೋಧರ್ಮಾಮೃತಧಾರಾಸ್ಸಹಸ್ರಶಃ ॥**

ಎಂಬ ವಚನವು ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಬೋಧಿಸುವುದು. ಇದಕ್ಕನುಸಾರವಾಗಿ ಸಂಗ್ರಹಸೂಕ್ತಿಯಲ್ಲಿಯೂ ಈ ಧರ್ಮಮೇಘವೆಂಬ ಸಮಾಧಿಯಿಂದಲೇ ಭಕ್ತರನ್ನು ಸಾಂಬಮೂರ್ತಿಯು ಅನುಗ್ರಹಿಸುತ್ತಿರುವನು ಎಂಬ ಅಭಿಪ್ರಾಯದಿಂದ "ಭವತತಿಜನಿತಾನೇಕಕರ್ಮಾನುರೂಪಂ ವಿಜ್ಞಾನಂ ದಿತ್ಸುರೇಭ್ಯಃ" ಎಂದು ನಿರ್ದೇಶಮಾಡಿರುತ್ತದೆ. ಅತಿ ನಿರ್ಮಲವಾದ ಮನಸ್ಸುಳ್ಳವರಿಗೆ ಮಾತ್ರವೇ ಜ್ಞಾನವನ್ನು ಉಪದೇಶಮಾಡುವನೆಂದು ಅಭಿಪ್ರಾಯಪಡುವುದಾದರೆ ಉಪದೇಶವಾದ **ನಂತರದಲ್ಲಿಯೇ ಜ್ಞಾನವು ಉಂಟಾಗುವುದು. ಮೋಕ್ಷವು ಪ್ರಾಪ್ತ**

**ತತೋ ಬಹುಕಾಲಸಮಾಧಿಃ ಸ್ಯಾತ್ । ಕೀರ್ತಯಂತಿ ಚ ದ್ವೈಪಾಯನಾದಯಃ ಬಹುಕಾಲಸಮಾಧಿಮಿತಿ । ತನ್ನ ಕಥಮಪಿ ಅನುಪಪತ್ತಿಃ ಸಂಭಾವ್ಯಾ ಶ್ರುತಿನಿರ್ದಿಷ್ಟಾರ್ಥೇ ಇತಿ ಸುಷ್ಠೂಕ್ತಂ ವರ ಇತಿ ಹೋತೇತಿ ಚ ಸಾಂಬಸ್ಯ ವಿಶೇಷಣಮಿತಿ । ಏತಾದೃಶೋ ಯೋ ಮಂತ್ರೋಕ್ತಃ ಸ ವಿಶ್ವಕರ್ಮೇತಿ ವಾಕ್ಯಶೇಷಃ । ಗಂಭೀರೋಽಯಂ ಮಂತ್ರ**

---

ವಾಗದೆ ಬಹುಕಾಲದವರಿಗೂ ಸಮಾಧಿಸ್ಥಿತಿಯು ಉಂಟಾಗುವುದು. ವ್ಯಾಸಋಷಿಯೇ ಮೊದಲಾದವರೂ ಕೂಡ ಬಹುಕಾಲದವರಿಗೂ ಸಮಾಧಿಸ್ಥಿತಿಯು ಜ್ಞಾನಿಯಾದವನಿಗೆ ಉಂಟಾಗುತ್ತದೆ ಎಂದು ಹೇಳುವರು. ಈ ಅಭಿಪ್ರಾಯವನ್ನು ಅನುಸರಿಸಿಯೇ ಶ್ರುತಿಯಲ್ಲಿ ನಿರ್ದೇಶಮಾಡಿ ವರ ಮತ್ತು ಹೋತಾ ಎಂಬ ಸಾಂಬಮೂರ್ತಿಯ ವಿಶೇಷಣವು ಯುಕ್ತವಾಗಿರುತ್ತದೆ. ಈ ವಿಷಯದಲ್ಲಿ ಯಾವವಿಧವಾದ ಅನುಪಪತ್ತಿಯೂ ಕೂಡ ಊಹಿಸುವುದಾಗಿ ಇರುವುದಿಲ್ಲ.

ಈ ಮಂತ್ರದಿಂದ ಈ ಪ್ರಕಾರವಾಗಿ ನಿರ್ದೇಶಮಾಡಲ್ಪಟ್ಟಿರುವ ಸಾಂಬಮೂರ್ತಿಯಾದ ಪರಮೇಶ್ವರನು ವಿಶ್ವಕರ್ಮನೇ ಆಗಿರುವನೆಂದು ತಿಳಿಯಬೇಕು. ಮಂತ್ರದ ಅರ್ಥವು ಬಹಳಮಟ್ಟಿಗೆ ಊಹಿಸಲು ಶಕ್ಯವಾದ ಅರ್ಥವುಳ್ಳದ್ದಾದಕಾರಣ ಈ ಶ್ರುತಿಯು ಅರ್ಥವನ್ನು ಸಂಗ್ರಹವಾಗಿ ಹೇಳಿರುವುದು. ವಿಶ್ವಕರ್ಮಶಬ್ದದಿಂದ ಸಮಸ್ತವಾದ ಸೃಷ್ಟಿಸ್ಥಿತಿಲಯರೂಪವಾದ ಕರ್ಮಗಳು ಬೋಧಿಸಲ್ಪಡುವುವು. "ವಿಶ್ವಾನಿ ಕರ್ಮಾಣಿ

**ವಿಶ್ವಾನಿ ಸೃಷ್ಟ್ಯವನಪ್ರಳಯರೂಪಾಣಿ ಕ-ರ್ಮಾಣಿ ಯಸ್ಯಾಸೌ ವಿಶ್ವಕರ್ಮಾ ಭವತಿ ।**

---

**ಇತಿ ತದರ್ಥಸಂಗ್ರಹಮಾಹ ಪ್ರಕೃತಶ್ರುತಿಃ । ವಿಶ್ವಾನಿ ಸೃಷ್ಟ್ಯವನಪ್ರಲಯರೂಪಾಣಿ ಕರ್ಮಾಣಿ ಯಸ್ಯಾಸೌ ವಿಶ್ವ-ಕರ್ಮಾ ಭವತೀತಿ। ಇಯತಾ ನಿಮಿತ್ತಕಾರಣತಾ ಸ್ಫುಟಿತಾ ।**

---

ಯಸ್ಯಸಃ" ಎಂಬ ಸಮಾಸದಿಂದ ಈ ಅರ್ಥವು ಉಪಸ್ಥಿತವಾಗಿರುವುದು. ಹೀಗೆ ಹೇಳಿರುವುದರಿಂದ ದೇವನು ಜಗತ್ತಿನ ಸೃಷ್ಟಿಸ್ಥಿತಿಲಯಕಾರ್ಯ ಗಳಿಗೆ ನಿಮಿತ್ತಕಾರಣನಾಗಿರುವನೆಂದು ತಿಳಿಯಬೇಕು.

"ಯಸ್ಮಿನ್ ಇದಗ್ ಸರ್ವಂ ಭುವನಂ ಜಜಾನ" ಎಂಬ ವಚನ ದಿಂದ ಈ ದೇವನು ವಿವರ್ತೋಪಾದಾನಕಾರಣನಾಗಿರುವನೆಂದು ತಿಳಿ ಯಬೇಕು. ಕಾರಣವಾದ ಪದಾರ್ಥವು ಕಾರ್ಯರೂಪದಿಂದ ಇರು ವುದು ವಿವರ್ತವೆನಿಸುವುದು. ಮೃತ್ತಿಕೆಯು ಘಟಾದಿರೂಪದಿಂದ ಇರುವುದೂ, ಸುವರ್ಣವು ಅನೇಕವಿಧವಾದ ಆಭರಣರೂಪದಿಂದ ಇರು ವುದೂ ವಿವರ್ತವೆನಿಸುವುದು. ಈ ವಿವರ್ತವಾದದಲ್ಲಿ ಮೂಲದ್ರವ್ಯವು ತನ್ನ ಕಾರ್ಯವಾದ ಎಲ್ಲಕ್ಕಿಂತಲೂ ಮೂಲಕಾರಣವಾಗಿ ಉಪಾದಾನ ವೆನಿಸಿರುವುದು. ಸಾಂಬಮೂರ್ತಿಯು ಪ್ರಪಂಚದ ಸೃಷ್ಟಿಗೆ ವಿವರ್ತೋ ಪಾದಾನಕಾರಣನಾಗಿರುವನು ಎಂಬುವದು "ಈ ದೇವನಲ್ಲಿಯೇ ಸಮಸ್ತ ವಾದ ಪ್ರಪಂಚವೆಲ್ಲವೂ ಉತ್ಪತ್ತಿಯನ್ನು ಹೊಂದಿರುವುದು" ಎಂದು

ಯಸ್ಮಿನ್ನಿದಗ್ಂ ಸರ್ವಂ ಭುವನಂ ಜಜಾನ।
ಯಸ್ಮಾದಿದಗ್ಂ ಸಮಸ್ತಗ್ಂ ಸಂಕಲ್ಪ -

ಅಥ ವಿವರ್ತೋಪಾದಾನಕಾರಣತಾಮಪ್ಯಾಹ। ಯಸ್ಮಿ....
ಜಜಾನೇತಿ। ಪ್ರಾದುರ್ಭೂತಮಿತ್ಯರ್ಥಃ। ಜನೀಪ್ರಾದು-
ರ್ಭಾವ ಇತಿ ಧಾತೋಃ। ಉಕ್ತದ್ವಿವಿಧಕಾರಣತಾಮೇಕ-
ಹೇಲಯೈವ ದೃಢಂ ಪ್ರತಿಪತ್ತುಮನುಕೀರ್ತಯತಿ।
ಯಸ್ಮಾದಿದಂ....ಮಾತ್ಮಾ ಭವತೀತಿ। ಇದಮತ್ರಾಕೂತಂ।
ಕೇನೇಯಂ ಕಾರಣದ್ವಯಾವಗತಿಃ। ಯಸ್ಮಾದಿತಿ

ಅರ್ಥವುಳ್ಳ "ಯಸ್ಮಿನ್" ಎಂಬ ಸೂತ್ರನಿರ್ದೇಶದಿಂದಲೇ ತಿಳಿದುಬರು ತ್ತದೆ. ಜನೀಪ್ರಾದುರ್ಭಾವೇ ಎಂಬ ಧಾತುವಿನಿಂದ ಜಜಾನ ಎಂದು ರೂಪವಾಗಿರುವುದು. ಜಜಾನ ಎಂಬ ಕ್ರಿಯಾಪದಕ್ಕೆ "ಪ್ರಾದುರ್ಭೂತಂ" ಎಂದು ಅರ್ಥವು "ಯಸ್ಮಾದಿದಗ್ಂ ಸಮಸ್ತಗ್ಂ ಸಙ್ಕಲ್ಪರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ। ಸ ವಿಶ್ವಕರ್ಮಾ ಪರಮಾತ್ಮಾ ಭವತಿ॥" ಎಂಬ ವಚನವು ಈ ಎರಡು ವಿಧವಾದ ಕಾರಣವೂ ಈ ದೇವನೊಬ್ಬನಿಗೆ ಲೀಲೆಯಿಂದಲೇ ಉಂಟಾಗಿರುವುದೆಂದು ಬೋಧಿಸುವುದು. ಯಸ್ಮಾತ್ ಎಂಬ ಪಂಚಮೀವಿಭಕ್ತಿಯಿಂದ ಈ ಅರ್ಥವು ತಿಳಿಯಬಹುದಾಗಿರು ತ್ತದೆ. ಸುವರ್ಣದಿಂದ ಕುಂಡಲವು ಆಗುವುದೆಂದು ಲೋಕದಲ್ಲಿ ವ್ಯವ

## ರೂಪಗ್ಂ ಶಿಲ್ಪಂ ಪ್ರಕಲ್ಪ್ಯತೇ ಸ ವಿಶ್ವ-ಕರ್ಮಾ ಪರಮಾತ್ಮಾ ಭವತಿ । ಆದಿಶಿಲ್ಪ-

---

**ಪಂಚವ್ಯಾ । ಕುತಸ್ತ್ಯೇಯಮರ್ಥಾವಗತಿರಿತಿ ಚೇತ್ ಲೋಕತ ಇತಿ ಪದಾಮಃ । ಸುವರ್ಣಾತ್ಕುಂಡಲಂ ಭವತೀತಿ ವ್ಯವಹರತಿ ಲೋಕಃ । ಕುಂಡಲಾತ್ಮನಾ ಸುವರ್ಣಂ ಪರಿಣ-ಮತ ಇತಿ ತದರ್ಥಃ । ತದಿಹ ಪರಿಣಾಮ್ಯುಪಾದಾನಂ ಪ್ರತೀಮಃ । ರಜ್ಜೋಃ ಸರ್ಪೋ ಭವತೀತಿ ಚ ವ್ಯವಹರತಿ ಲೋಕಃ । ಸರ್ಪಭಾನೇ ರಜ್ಜುಃ ಕಾರಣಮಿತಿ ತತಃ ಪ್ರತೀಮಃ । ಪ್ರತೀಮಶ್ಚ ಸರ್ಪಸ್ಯ ವಿವರ್ತೋಪದಾನಂ**

---

ಹಾರವಿರುವುದು. ಸುವರ್ಣವೇ ಕುಂಡಲದ ರೂಪವಾಗಿ ಪರಿಣಾಮ ವನ್ನು ಹೊಂದುವುದೆಂದು ತಿಳಿಯುವುದು. ಇದರಿಂದ ಸುವರ್ಣವು (ಕುಂಡಲಕ್ಕೆ ಪರಿಣಾಮ್ಯುಪಾದಾನವಾಗಿರುವುದು) ಕುಂಡಲಾತ್ಮನಾ ಪರಿಣಾಮಕ್ಕೆ ಉಪಾದಾನವಾಗಿರುವುದು. ರಜ್ಜುವು ಸರ್ಪವಾಗುವುದು ಎಂದು ಲೋಕವ್ಯವಹಾರದಲ್ಲಿ ಸರ್ಪಭಾವಕ್ಕೆ ರಜ್ಜುವು ಕಾರಣವಾಗಿರು ವುದು. ರಜ್ಜುವು ಸರ್ಪಭಾವದಿಂದ ತೋರುವುದನ್ನು ವಿವರ್ತವೆಂದು ಹೇಳುವರು. ಈ ವಿವರ್ತದಲ್ಲಿ ಸರ್ಪಭಾವಕ್ಕೆ ರಜ್ಜುವು ವಿವರ್ತೋ ಪಾದಾನವಾಗಿರುವುದು. ಕುಂಬಾರನಿಂದ ಘಟಗಳು ಉಂಟಾ ಗುವುವು ಎಂಬ ವ್ಯವಹಾರದಲ್ಲಿ ಘಟಗಳ ಉತ್ಪತ್ತಿಯನ್ನು ಕುರಿತು

**ರಜ್ಜುರಿತಿ । ಏವಮೇವ ಕುಲಾಲಾದ್ಘಟಾ ಭವಂತೀತಿ। ಇಹ ಚ ಕುಲಾಲಂ ನಿಮಿತ್ತಕಾರಣಂ ಪ್ರತೀಮಃ। ಹೇತ್ವರ್ಥ-ಕತ್ವಾತ್ ಪಂಚಮ್ಯಾಃ। ಸಾಂಬಃ ಪುನರ್ನ ಪರಿಣಾಮ್ಯು-ಪಾದಾನಂ। ಸಾವಯವಸ್ಯೈವ ಹಿ ಪರಿಣಾಮಃ। ಸಾವ-ಯವತ್ವೇ ಚ ಘಟಾದಿವದನಿತ್ಯತ್ವಂ ಪ್ರಸಜ್ಯೇತ। ತತಶ್ಚ ಶ್ರುತಪೂರ್ವಂ ನಿತ್ಯತ್ವಂ ಬಾಧ್ಯೇತೇತಿ ಅಭಿಪ್ರಯಂತೀ, ಯಸ್ಮಾದಿತ್ಯಾದಿರೂಪಾ ಉಪನಿಷತ್ಪ್ರವರ್ತತ ಇತಿ। ನನು**

---

ಕುಂಬಾರನು ನಿಮಿತ್ತಕಾರಣನಾಗಿರುವನು. ಪಂಚಮೀವಿಭಕ್ತಿಯು ಯಾವಾಗಲೂ ಕಾರಣವಾಚಕವಾಗಿರುವುದು. ಲೋಕದ ಉತ್ಪತ್ತಿಯೇ ಮೊದಲಾದವುಗಳ ವಿಷಯದಲ್ಲಿ ಸಾಂಬನು ಪರಿಣಾಮ್ಯುಪಾದಾನವಾಗಿ ರುವುದಿಲ್ಲ. ಅವಯವವುಳ್ಳ ಪದಾರ್ಥವು ಪರಿಣಾಮವನ್ನು ಹೊಂದು ವುದು. ಘಟಾದಿ ಪದಾರ್ಥಗಳು ಸಾವಯವಗಳಾಗಿರುತ್ತವೆ. ಇವುಗಳು ಮೃತ್ತಿಕೆಯ ಪರಿಣಾಮವಾಗಿರುತ್ತವೆ. ಆದ್ದರಿಂದಲೇ ಇವುಗಳು ಅನಿತ್ಯ ಪದಾರ್ಥಗಳೆಂದು ನಿರ್ದಿಷ್ಟವಾಗಿರುವುವು. ಸಾಂಬನು ಪ್ರಪಂಚದ ಉತ್ಪತ್ತಿಯ ವಿಷಯದಲ್ಲಿ ಪರಿಣಾಮ್ಯುಪಾದಾನವಾದರೆ ಘಟಾದಿಗಳಂತೆ ಅನಿತ್ಯವಸ್ತುವಾಗುವನು. ಹಿಂದಿನಿಂದಲೂ ಈ ನಿರ್ದಿಷ್ಟವಾದ ನಿತ್ಯತ್ವವು ಇದರಿಂದ ಬಾಧಿತವಾಗುವುದು ಎಂಬ ಅರ್ಥವು ಈ ಉಪನಿಷದ್ಗತ ವಾದ "ಯಸ್ಮಾತ್" ಎಂಬ ಪಂಚಮೀ ವಿಭಕ್ತಿಯಿಂದಲೇ ವ್ಯಕ್ತವಾಗು ವುದು.

## ಕೃತ್ತತಃ ಸ ಭವತಿ । ಮನಸಾ ಯತ್ಸೃಜ್ಯತೇ

ಸಂತಿ ಭವಿಷ್ಯಂತಿ ಅಭೂವಂಶ್ಚಾನೇಕೇ ಶಿಲ್ಪಿನಃ ಸ್ವಸ್ವ-ಶಕ್ತ್ಯನುಗುಣಶಿಲ್ಪಾಃ । ಕಃ ಪುನರಸ್ಯಾತಿಶಯಃ? ತಮಾಹ। ಆದಿಶಿಲ್ಪಕೃತ್ತತಃ ಸ ಭವತೀತಿ । ಸ ಏವ ಶಿಲ್ಪಿನಾಂ ಶಿಲ್ಪ-ಮಾರ್ಗಪ್ರದರ್ಶಕಃ ಸ ಏವ ಪರಮಾತ್ಮೇತಿ ಸೋಽಸಾವತಿ-ಶಯ ಇತ್ಯಾಶಯಃ । ಸುಗಮೋಽತೋಽನ್ಯೋಽಕ್ಷರಾರ್ಥ

ಶಿಲ್ಪಿಗಳಾಗಿದ್ದವರು ಅನೇಕರು ಕಳೆದುಹೋದರು. ಈಗ ಬಹಳ ಜನರು ಶಿಲ್ಪಿಗಳಾಗಿ ಇರುವರು. ಮುಂದೆ ಅನೇಕ ಜನರು ಶಿಲ್ಪಿಗಳಾಗುವರು. ಇವರೆಲ್ಲರೂ ತಮ್ಮತಮ್ಮ ಶಿಲ್ಪಜ್ಞಾನಕ್ಕೆ ಅನುಗುಣವಾದ ಶಿಲ್ಪಿಗಳಾಗಿರುವರು. ಹೀಗಿರುವಾಗ ಶಿಲ್ಪಶಾಸ್ತ್ರದ ಜ್ಞಾನದ ವಿಷಯದಲ್ಲಿ ಅತಿಶಯವು ಯಾವವಿಧವಾಗಿರುತ್ತದೆ ಎಂದು ಸಂಶಯವು ಉಂಟಾಗುವುದು. ಇದನ್ನು ಪರಿಹರಿಸುವುದಕ್ಕಾಗಿಯೇ "ಆದಿಶಿಲ್ಪಕೃತ್ತತಃ ಸ ಭವತಿ" ಎಂದು ಸೂತ್ರವು ಪ್ರವೃತ್ತವಾಗಿರುವುದು. ಸಾಂಬದೇವನೇ ಶಿಲ್ಪಿಗಳಿಗೆ ಶಿಲ್ಪಜ್ಞಾನವು ಉಂಟಾಗಲು ಅನುಗ್ರಹಿಸುವವನು ಮತ್ತು ಅವನೇ ಪರಮಾತ್ಮನಾಗಿರುವನು ಎಂಬುವುದೇ ಇತರ ಶಿಲ್ಪಿಗಳಿಗಿಂತ ಅತಿಶಯವಾಗಿರುವುದು ಎಂದು ಅಭಿಪ್ರಾಯವು. ಈ ಕಾರಣದಿಂದಲೇ ಈ ಸೂತ್ರಗತವಾದ ಇತರ ಪದಗಳ ಅಭಿಪ್ರಾಯವು ಸುಲಭವಾಗಿ ತಿಳಿಯಲು ಸಾಧ್ಯವಾಗಿರುವುದರಿಂದ ವಿವರಣೆಯನ್ನು ಹೇಳಿಲ್ಲವು.

**ಇತಿ। ನ ತದ್ವಿವರಣಾಯ ಪ್ರಯತ್ನಃ । ನನ್ವಿದಮಸಂಬದ್ಧ-ಮುಪನ್ಯಸ್ತಂ । ಸ ವಿಶ್ವಕರ್ಮೇತಿ ಆದಿಶಿಲ್ಪಕೃದಿತಿ ಚ ಯಾವತಾ ಸಂಕಲ್ಪ ಏವ ತಸ್ಯೋಕ್ತಃ ನ ವಿಶ್ವಕರ್ತೃತ್ವಂ ಕರ್ಮಕರಾಣಾಮಿವ ನ ಚ ಲೋಕೇ ಸಂಕಲ್ಪಮಾತ್ರಮಾಚ-ರತಃ ಕರ್ಮಕೃತ್ತ್ವಂ ವ್ಯವಹರಂತೀತಿ ಹಾಸ್ಯಮೇತತ್ ಸಾಂಬಸ್ಯ ಶಿಲ್ಪವಚನಮಿತಿ ಚೇತ್ ನ। ವೇದವಾದಾತ್। ಯತ್ರ ಸ್ವಪ್ನೇ ರಥಾದಯಃ ನ ಸಂತಿ ತತ್ರ ತಾನ್ ಸೃಜತ ಇತಿ**

ಈ ಸಾಂಬಮೂರ್ತಿಯು ವಿಶ್ವಕರ್ಮನೆಂಬುದಾಗಿಯೂ, ಆದಿ ಶಿಲ್ಪಕರ್ತೃವೆಂಬದಾಗಿಯೂ ಈ ಉಪನಿಷತ್ತಿನಲ್ಲಿ ಉಕ್ತವಾಗಿರುತ್ತದೆ. ಈ ದೇವನ ಸಂಕಲ್ಪವೇ ವಿಶ್ವಸೃಷ್ಟ್ಯಾದಿಗಳಿಗೆ ಕಾರಣವಾಗಿರುತ್ತದೆ. ಕೆಲಸಗಳನ್ನು ಮಾಡುವಹಾಗೆ ಪ್ರಪಂಚದ ಸೃಷ್ಟಿಯೇ ಮೊದಲಾದ ಕರ್ಮಕರ್ತೃತ್ವವು ಇರುವುದಿಲ್ಲ. ಲೋಕದಲ್ಲಿ ಸಂಕಲ್ಪವನ್ನು ಮಾತ್ರವೇ ಆಚರಿಸುವವರಿಗೆ ಕರ್ಮಕರ್ತೃತ್ವ ವ್ಯವಹಾರವು ಇರುವುದಿಲ್ಲ. ಆದ್ದರಿಂದ ಸಂಕಲ್ಪಮಾತ್ರವನ್ನು ಆಚರಿಸುತ್ತಿರುವ ಈ ಸಾಂಬಮೂರ್ತಿಗೆ "ಆದಿಶಿಲ್ಪಕೃತ್" ಎಂಬುದಾಗಿ ವ್ಯವಹಾರಮಾಡುವುದು ಯುಕ್ತವಲ್ಲ ಎಂದು ಆಕ್ಷೇಪವು ಉಂಟಾಗುವುದು. ವೇದವಾದದಿಂದ ಈ ಆಕ್ಷೇಪಕ್ಕೆ ಸಮಾಧಾನವು ಉತ್ತರವಾಗಿರುವುದು. ರಥವೇ ಮೊದಲಾದವುಗಳು ಇಲ್ಲದಿರುವ ಸ್ವಪ್ನದಲ್ಲಿ ಅವುಗಳನ್ನು ಸೃಷ್ಟಿ ಮಾಡುವನು ಎಂದು ಅಂತಸ್ಸೃಷ್ಟಿಯನ್ನು ವೇದವು ಬೋಧಿಸುವುದು.

## ವಿಶ್ವಕೃದಸ್ತತ್ಸರ್ವಗ್ಂ ಶಿಲ್ಪಮೇವ ಭವತಿ ।

ಅಂತಸ್ಸೃಷ್ಟಿಂ ವದತಿ ವೇದಃ । ತದ್ವದೇವೇಹ ಸೃಷ್ಟಿಃ ಕೀರ್ತ್ಯತೇ । ಸ ಹಿ ಕರ್ತೇತಿ । ತಸ್ಯ ಸ್ವಪತಃ ಕರ್ತೃತ್ವಮಪಿ ವದತಿ ವೇದಃ । ತದ್ವದೇವೇಹ ಕರ್ತೃತ್ವಂ ಕೀರ್ತ್ಯತ ಇತಿ ನ ಲೇಶತೋ ಹ್ಯಾಸೋಽವಕಾಶೇತೀತಿ । ತದಿದಮಾಹ । ಮನಸಾ ಯತ್ಸೃಜ್ಯತೇ ವಿಶ್ವಕೃತ್ ಅಂತಃ ತತ್ಸರ್ವಂ ಶಿಲ್ಪಮೇವ ಭವತೀತಿ । ಸಂಸೃಜ್ಯತ ಇತಿ ದೈವಾದಿಕೋ-ಽಯಮಕರ್ಮಕೋ ಧಾತುಃ । ತತಶ್ಚ ಯತ್ತದಿತಿ ನ

ಇದರಂತೆಯೇ ಪ್ರಪಂಚದ ಸೃಷ್ಟಿಯೂ ಬೋಧಿತವಾಗಿ ಸೃಷ್ಟಿಯ ಕರ್ತನೆಂದು ಸಾಂಬನನ್ನು ಹೇಳಿರುವುದು. ಸ್ವಪ್ನವೆಂಬುವುದು ಸ್ವಾಪ ಕಾಲದಲ್ಲಿ (ನಿದ್ರೆಯಲ್ಲಿ)ಯೇ ಉಂಟಾಗುವುದು. ಸ್ವಾಪಕಾಲದಲ್ಲಿ ಉಂಟಾಗುವ ಸ್ವಪ್ನದಲ್ಲಿಯೇ ರಥಾದಿಗಳ ಕರ್ತೃತ್ವವನ್ನು ಬೋಧಿಸುವ ವೇದವು ಪ್ರಪಂಚದ ಸೃಷ್ಟಿಕರ್ತೃತ್ವವನ್ನು ಬೋಧಿಸುತ್ತಿರುವುದರಲ್ಲಿ ಕೊಂಚವೂ ಆಕ್ಷೇಪವು ಉಂಟಾಗುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ. ಈ ಅಭಿಪ್ರಾಯದಿಂದಲೇ "ಮನಸಾ ಯತ್ ಸೃಜ್ಯತೇ ವಿಶ್ವಕೃತ್ ಅಂತಃ ತತ್ಸರ್ವಂ ಶಿಲ್ಪಮೇವ ಭವತಿ" ಎಂದು ಸೂತ್ರವು ಪ್ರವೃತವಾಗಿರುತ್ತದೆ. ಸೃಜ್ಯತೇ ಎಂಬುವುದು ದಿವಾದಿಗಣಪಠಿತವಾದ ಅಕರ್ಮಕ ಧಾತುವಿನಿಂದ ಉಂಟಾದ ರೂಪವಾಗಿರುತ್ತದೆ. ಸೂತ್ರಗತವಾದ ಯತ್.

ಕರ್ಮಾರ್ಥಕೌ ಶಬ್ದೌ। ಅಪಿ ತರ್ಹಿ ಯದಾ ತದೇತಿ ಕಾಲಾರ್ಥಕೌ । ನನ್ವೇವಂ ತರ್ಹಿ ನಾಸ್ಮಾದ್ವಚನಾತ್ ಸ್ರಷ್ಟೃತ್ವಂ ಸಿಧ್ಯೇತ್ ಸಂಬಂಧವಾದಾದಿತಿ ಚೇತ್ ಸಿಧ್ಯೇ- ದಿತಿ ಬ್ರೂಮಃ । ಮನೋಽಂತರಸ್ತಿ ಸಾಂಬೋಽಂತರಸ್ತಿ ವ್ಯಾಪೀ ತತೋ ನಿತ್ಯಸಂಸರ್ಗಃ ಪ್ರಮಿತಃ । ಅತೋ ಯದಾ ತದೇತಿ ಕಾದಾಚಿತ್ಕತಾವಾದಃ ನೋಪಪದ್ಯತೇ । ನ ಚೈಷ ಉಸ್ಮತ್ತಸ್ಯ ವಾದಃ । ತದ್ಯಥಾ ಯಥೋಪಪದ್ಯೇತ ತಥಾ

---

ತತ್ ಎಂಬ ಎರಡು ಶಬ್ದಗಳೂ ಕರ್ಮಾರ್ಥಬೋಧಕಗಳಾಗಿರುವು ದಿಲ್ಲ. ಇವುಗಳು ಯದಾ, ತದಾ ಎಂಬುದಾಗಿ ಕಾಲವನ್ನು ಬೋಧಿ ಸುವುವು. ಕಾಲವನ್ನು ಬೋಧಿಸುವುದಾದರೆ ಈ ವಚನದಿಂದ ಸ್ರಷ್ಟೃತ್ವವು ಸಿದ್ಧವಾಗುವುದಿಲ್ಲ. ಈ ಪದದಿಂದ ಸಂಬಂಧವನ್ನು ಬೋಧಿಸುವು ದಾದರೆ ಮನಸ್ಸು ಅಂತಃಸ್ಥಿತಿಯುಳ್ಳದ್ದಾಗಿರುವುದು. ಮನಸ್ಸಿನಲ್ಲಿ ಸಾಂಬನು ವ್ಯಾಪಿಯಾಗಿರುವನು. ಇದರಿಂದ ಮನಸ್ಸಿಗೂ ಸಾಂಬನಿಗೂ ನಿತ್ಯವಾದ ಸಂಸರ್ಗವು ಪ್ರಮಾಣಗಮ್ಯವಾಗಿ ಇರುವುದು. ಈ ಕಾರಣ ದಿಂದಲೇ ಯದಾ, ತದಾ ಎಂಬುದಾಗಿ ಕಾಲವಾಚಕ ಶಬ್ದಗಳಿಂದ ಕಾದಾಚಿತ್ಕತಾವಾದವನ್ನು ಹೇಳಬಾರದು ಮನಸ್ಸಿಗೂ ಸಾಂಬನಿಗೂ ಇರುವ ಸಂಬಂಧವು ಕದಾಚಿತ್ ಉಂಟಾಗಿರುವುದು ಎಂದು ಕಾದಾಚಿ ತ್ಕತಾವಾದವನ್ನು ನಿರೂಪಮಾಡಬೇಕು. ಮನಸ್ಸಿಗೂ ಸಾಂಬನಿಗೂ ಸಂಸರ್ಗವು ನಿತ್ಯವಾಗಿರುವ ವಾದವನ್ನು ತಿಳಿದುಕೊಳ್ಳಬೇಕು. ವೃತ್ತಿ ವಿಶೇಷವು ಮನಸ್ಸಿಗೆ ವಿಶೇಷಣವಾಗುವಾಗ ಸಂಸರ್ಗವು ಕಾದಾಚಿತ್ಕ

ತಥಾ ಯತಿತವ್ಯಂ । ವೃತ್ತಿವಿಶೇಷೋ ಯದಿ ಮನೋ
ವಿಶಿಂಷ್ಯಾತ್ಕಾದಾಚಿತ್ಕಃ ನ ತರ್ಹಿ ತಾದೃಶೀ ಅನುಪಪತ್ತಿಃ ।
ವೃತ್ತಿವಿಶೇಷವಿಶೇಷಿತಮನಸಃ ಕಾದಾಚಿತ್ಕಾತ್ವಾತ್ತತ್ಪ್ರತಿ -
ಯೋಗಿಕಸ್ಯ ಸಂಸರ್ಗಸ್ಯಾಪಿ ಕಾದಾಚಿತ್ಕತಾಸಿದ್ಧೇಃ । ನನು
ಮನಸಾ ಬಹಿಃಸಂಸರ್ಗೋಽಸಂಭವೀ ಅತೋಽಂತರಿತಿ
ನಿರ್ದೇಶೋಽನರ್ಥಕಃ ಪ್ರಾಪ್ನೋತಿ । ನ ಪ್ರಾಪ್ನೋತಿ ।
ಕಥಂ ಕೃತ್ವಾ । ಲೋಕಾನುಭವಂ ಪ್ರಮಾಣೀಕೃತ್ಯ ।
ಕೀದೃಶೋಽಯಮನುಭವಃ ? ತಮಾಹ। ಜಾಗ್ರತಂ ದೇವ-
ದತ್ತಂ ಆಹ್ವಯಂತೋ ವದಂತಶ್ಚ ವೃತ್ತಾಂತಂ ಜನಾ

---

ವಾಗುವುದು. ವೃತ್ತಿವಿಶೇಷವಿಶೇಷಿತವಾದ ಮನಸ್ಸು ಕಾದಾಚಿತ್ಕವೆಂದು ಸಿದ್ಧವಾಗಿರುವುದು. ಇದರಿಂದ ಈ ಪ್ರಕಾರವಾದ ವೃತ್ತಿವಿಶೇಷವಿಶೇಷಿತವಾದ ಮನಸ್ಸಿನ ಕಾದಾಚಿತ್ಕಸ್ಥಿತಿಯು ಅನಿತ್ಯವಾಗಿರುವುದು.

ಮನಸ್ಸಿನೊಡನೆ ಬಹಿಸ್ಸಂಸರ್ಗವು ಸಾಂಬನಿಗೆ ಅಸಂಭವವಾಗಿರುವುದು. ಲೋಕಾನುಭವದಿಂದ ಅಂತಸ್ಸಂಸರ್ಗವು ಪ್ರಾಮಾಣಿಕವಾಗಿರುವುದು. ದೇವದತ್ತನೆಂಬುವನು ಜಾಗ್ರದವಸ್ಥೆಯಲ್ಲಿರುವಾಗ ಅವನನ್ನು ನಾಮನಿರ್ದೇಶಮಾಡಿ ಜನರು ಕರೆಯುವರು. ಅವನ ಸಂಗಡ ಮಾತಾಡಲು ಯತ್ನಮಾಡುವರು. ಜನಗಳು ಹೀಗೆ ಯತ್ನವನ್ನು ಮಾಡಿದರೂ ಅವನು ಮಾತನಾಡದೆ ಇರುವುದನ್ನು ನೋಡಿ ದೇವದತ್ತನು ಬಹಿರ್ಮನಸ್ಕನಾಗಿರುವುದಿಲ್ಲ. ಆದ್ದರಿಂದಲೇ ನಮ್ಮ ಮಾತುಗಳು ಇವನಿಗೆ ಕೇಳಿಸಲಿಲ್ಲ. ನಮಗೆ ಇವನು ಉತ್ತರವನ್ನು ಕೊಡಲಿಲ್ಲವೆಂದು ಹೇಳುವರು.

ಯದಾ ಅಸಿಬ್ಬಾರ್ಥಾ ಭವಂತಿ । ತದಾ ವಕ್ತಾರೋ ಭವಂತಿ । ಜಾಗ್ರದಪಿ ದೇವದತ್ತೋಽಂತರ್ಮನಸ್ಕ ಏವ ನ ಬಹಿರ್ಮನಸ್ಕಃ ಯತೋ ನಾಸ್ಮದ್ವಚನಮಶೃಣೋತ್ ಯತ್ಕಾರಣಂ ನೋತ್ತರಮುವಾದಿತಿ । ಸ ಚ ದೇವದತ್ತಃ ಕಾಲಾಂತರೇ ತೈರಾಹ್ವಾನಾದಿಕಂ ಬೋಧ್ಯಮಾನಃ ಪ್ರತಿವದತಿ । ಅಂತರ್ಮನಸ್ಕೋಽಹಮನುಭವಂ ನ ಬಹಿರ್ಮನಸ್ಕಃ ತತೋ ನಾಶೃಣವಮಿತಿ । ತನ್ಮಾನರ್ಥಕಃ ಅಂತರಿತಿ ನಿರ್ದೇಶಃ । ಕಿಮುತೋ ಯದ್ಯೇವಂ ? ಏತದತೋ ಭವತಿ— ಮಾನಸಿಕವ್ಯಾಪಾರಮಾತ್ರಾತ್ ಮಹಾ ಮಹತೋ ವಿಶ್ವಸರ್ಜನಸ್ಯ ಸಿದ್ಧಿರ್ಯದಿ ತರ್ಹಿ ಸ ವಿಶ್ವಸ್ರಷ್ಟಾ ಅಚಿಂತ್ಯವೈಭವಃ

---

ದೇವದತ್ತನೂ ಕೂಡ ಜನಗಳ ಆಹ್ವಾನಾದಿಗಳಿಗೆ ನಾನೂ ಉತ್ತರವನ್ನು ಕೊಡಲಿಲ್ಲ. ನಾನು ಅಂತರ್ಮನಸ್ಕನಾಗಿದ್ದೆನು, ಬಹಿರ್ಮನಸ್ಕನಾಗಿರಲಿಲ್ಲ. ಇದರಿಂದಲೇ ಇವರ (ವಚನವು) ಮಾತುಗಳು ಕೇಳಲಿಲ್ಲವೆಂದು ಉತ್ತರಕ್ಷಣದಲ್ಲಿಯೇ ಹೇಳುವನು. ಇವರಿಂದಲೇ ಅಂತಸ್ಸಂಬಂಧವು ನಿತ್ಯವೆಂದು ತಿಳಿಯಬೇಕು.

ಮನಸ್ಸಿನ ಸಂಕಲ್ಪರೂಪವಾದ ಮಾನಸಿಕವ್ಯಾಪಾರಮಾತ್ರದಿಂದಲೇ ಬಹಳ ದೊಡ್ಡದಾದ ಪ್ರಪಂಚದ ಸೃಷ್ಟಿಯ ಸಿದ್ಧಿಯು ಆಗುವುದಾದರೆ ಪ್ರಪಂಚಸ್ರಷ್ಟೃವಾದ ವಿಶ್ವಕರ್ಮನು ಊಹಿಸಲಶಕ್ಯವಾದ ಮಹಿಮೆಯುಳ್ಳವನೆಂದು ತಿಳಿಯಬೇಕು. "ತತ್ಸರ್ವಗ್ ಶಿಲ್ಪಮೇವ

ಯತ್ತದ್ವಿಧಾನಮನುಬ್ರೂಹೀತಿ ಛಾತ್ರೇಣ
ಪೃಷ್ಟೋ ದೇಶಿಕಸ್ಸ ಪುನರುವಾಚೇತಿ। ಯದಾ

ಸ್ಯಾದಿತಿ । ಅತಶ್ಚ ಏವಕಾರೋ ಭಿನ್ನಕ್ರಮಃ ಸರ್ವಮೇವ ಶಿಲ್ಪಮಿತಿ । ಸೂತ್ರಿತಸ್ಯ ಜಗತ್ಸರ್ಜನಸ್ಯ ವಿಸ್ತರತಃ ಬೋಧ-ನಾಯ ಗುರುಶಿಷ್ಯಯೋಃ ಪ್ರಶ್ನಸಮಾಧಾನೇ ಕೀರ್ತಯತಿ ನಾಪೃಷ್ಟಃ ಕಸ್ಯಚಿದ್ಬ್ರೂಯಾದಿತಿ ಪ್ರಮಾಣಂ ಸ್ಮರಂತೀ ಶ್ರುತಿಃ "ಯತ್ತದಿತ್ಯಾದಿನಾ............ಉವಾಚೇತ್ಯಂತೇನ । ಯದಿಹ ಸೂತ್ರಿತಂ ತಸ್ಯಾನುವಿಧಾನಂ ಸೂತ್ರಿತಮರ್ಥ-

ಭವತಿ" ಎಂಬ ವಾಕ್ಯದಲ್ಲಿರುವ ಏವಕಾರವು ಭಿನ್ನ ಕ್ರಮದಿಂದ ಯೋಜನೆಯನ್ನು ಹೊಂದಿ "ಸರ್ವಮೇವ ಶಿಲ್ಪಂ ಭವತಿ" ಎಂದು ಸೂತ್ರಗತವಾದ ಪದಗಳ ಯೋಜನೆಯನ್ನು ಹೇಳಬೇಕು. ಇದರಿಂದ ಜಗತ್ತಿನ ಸೃಷ್ಟಿಯು ಬಹಳ ದೊಡ್ಡದಾಗಿರುವುದು ಎಂದು ಅರ್ಥವು ಬೋಧಿತವಾಗುತ್ತದೆ.

"ನ ಅಪೃಷ್ಟಃ ಕಸ್ಯಚಿತ್ ಬ್ರೂಯಾತ್" ಪ್ರಶ್ನೆಯನ್ನು ಕೇಳದೆ ಇರುವವನಿಗೆ ಯಾರಿಗೂ ಉತ್ತರವನ್ನು ಹೇಳಬಾರದು ಎಂದು ನೀತಿಯು ಇರುವುದರಿಂದ ಈ ಪ್ರಮಾಣಕ್ಕನುಸಾರವಾಗಿ ಶ್ರುತಿಯೂ ಕೂಡ ''ಯತ್ತತ್'' ಎಂದು ಮೊದಲುಮಾಡಿಕೊಂಡು "ಉವಾಚ" ಎಂಬ ವಚನವು ಕೊನೆಯಾಗುವವರಿಗೂ ಗುರುಶಿಷ್ಯರ ಪ್ರಶ್ನೆ ಸಮಾಧಾನರೂಪದಿಂದ ಸೃಷ್ಟಿಯ ಕ್ರಮವನ್ನು ಬೋಧಿಸುವುದು. ಸೂತ್ರದ ಅರ್ಥ

ಸ ಪ್ರರಬ್ರಹ್ಮಣಸ್ಸಂಕಲ್ಪೋದಯೋ ಭವತಿ
ತದೈವಾಹಂಕಾರಃ ಪ್ರಜಾಯತೇ ತಸ್ಮಾ-

---

ಮನುರುಧ್ಯೈವ ಧಾರಣಂ ವಿಸ್ತರತಃ ಪ್ರತಿಪಾದನರೂಪ-
ಶಬ್ದಜಾತಮಿತ್ಯರ್ಥಃ । ಸುಗಮಮನ್ಯತ್ । ಪೃಷ್ಟಮರ್ಥ-
ಮನುಶಾಸ್ತ್ರೀ ಶ್ರುತಿರ್ವೃತ್ತಮನುಕೀರ್ತಯತಿ । ಯದೇತಿ ।
ಸ ಸಂಕಲ್ಪೋದಯಃ ಪರಬ್ರಹ್ಮಣ ಇತ್ಯನ್ವಯಃ । ಏವಂ
ವೃತ್ತಮನುಕೀರ್ತ್ಯ ವರ್ತಿಷ್ಯಮಾಣಾಯೋಪಕ್ರಮತೇ ತದೈ-
ವಾಹಂಕಾರ ಇತ್ಯಾದಿನಾ । ಅಂಬಯೋಪಲಕ್ಷಿತಸ್ಯ ಶುದ್ಧ-

---

ವನ್ನು ಅನುಸರಿಸಿ ವಿಧಿಸಿರುವುದು. ಸೂತ್ರಾರ್ಥವನ್ನು ವಿಸ್ತಾರವಾಗಿ ಅರ್ಥವನ್ನು ಬೋಧಿಸುವ ಶಬ್ದಗಳಿಂದ ಪ್ರತಿಪಾದಿಸುವುದು ಸೂತ್ರಾರ್ಥ ಧಾರಣವೆನಿಸಿರುವುದು. ಈ ಪ್ರಕಾರವಾದ ರೀತಿಯಿಂದಲೇ ಸೂತ್ರಾರ್ಥ ವನ್ನು ಉಪದೇಶಮಾಡುವಂತೆ ಶಿಷ್ಯನು ಗುರುವನ್ನು ಕುರಿತು ಪ್ರಶ್ನೆ ಮಾಡಿರುವನು.

"ಯದಾ" ಎಂದು ಮೊದಲುಗೊಂಡು ಇರುವ ಶ್ರುತಿಯು ಶಿಷ್ಯನು ಪ್ರಶ್ನೆಮಾಡಿರುವ ವಿಷಯವನ್ನು ಸಮಗ್ರವಾಗಿ ಬೋಧಿಸುವುದು. ಪರ ಬ್ರಹ್ಮನ ಸಂಕಲ್ಪವು ಉಂಟಾದಕೂಡಲೆ ಅಹಂಕಾರವು ಉಂಟಾಗುವುದು. ಎಂದರೆ, ಪರಬ್ರಹ್ಮನ ಸಂಕಲ್ಪವು ಉದಯವಾದನಂತರ ಅಹಂಕಾರವು ಉತ್ಪನ್ನವಾಗುವುದು. ಶುದ್ಧವಾದ ಚಿದ್ರೂಪಕ್ಕೆ ಮಾಯಾಸಂಬಂಧ

ತ್ಪಂಚ ಚ ಭೂತಾನಿ । ಭೂತೇಭ್ಯ ಓಷಧ-

ಚಿತಃ ಪ್ರಾಣಿಕರ್ಮಭಿರ್ಜಗದ್ರಚನಾಯೈ ಪ್ರೇರಿತಸ್ಯ ಮಾಯಾವಿಷಯಕಾಲೋಚನಾಯ ವೃತ್ತಿವಿಶೇಷೋಽಹಂಕಾರಾಖ್ಯೋ ಜಾತಃ । ತತಃ ಪೃಥಿವ್ಯಾದೀನಿ ಪಂಚಭೂತಾನಿ ಜಾತಾನೀತಿ ಭಾಸವಾನೋಽರ್ಥಃ । ಅತ್ರ ಶ್ರುತ್ಯಂ-

ವುಂಟಾಗಿ ಚಿದ್ರೂಪವು ಮಾಯೋಪಾಧಿಕವೆನಿಸಿಕೊಳ್ಳುವುದು. ಇದನ್ನು ಶಬಳಬ್ರಹ್ಮವೆಂದು ಕರೆಯುವರು. ಪ್ರಾಣಿಗಳ ಕರ್ಮಗಳಿಂದ ಜಗತ್ತನ್ನು ಸೃಷ್ಟಿಮಾಡುವುದಕ್ಕಾಗಿ ಉಂಟಾಗಿರುವ ಸಂಕಲ್ಪರೂಪವಾದ ಇಚ್ಛೆಯುಳ್ಳವನಾಗಿ ಮಾಯಾವಿಷಯವಾದ ಪ್ರಾಣಿಗಳ ಕರ್ಮಗಳನ್ನು ಅವುಗಳ ನಿರ್ಮಾಣಕ್ಕಾಗಿ ಯೋಚಿಸುವ ಸಾಂಬನ ಇಚ್ಛಾವಿಶೇಷವು ಅಹಂಕಾರವೆನಿಸಿರುತ್ತದೆ. ಈ ಅಹಂಕಾರದಿಂದ ಪೃಥಿವಿಯೇ ಮೊದಲಾದ ಪಂಚಭೂತಗಳು ಉತ್ಪನ್ನವಾದವು. (ಶ್ರುತ್ಯಂತರದಿಂದ) ಬೇರೆಯ ಶ್ರುತಿಯಿಂದ ಸಿದ್ಧವಾಗುವ ಅರ್ಥಗಳನ್ನು ಇಲ್ಲಿ ಅನಾದರಮಾಡಿ ಅಂಗೀಕರಿಸುವುದಿಲ್ಲ. ಈ ಅರ್ಥವು ಅನುಮಾನಪ್ರಮಾಣದಿಂದ ಅಥವಾ ಅರ್ಥಾಪತ್ತಿಪ್ರಮಾಣದಿಂದ ಸಿದ್ಧವಾಗುವುದು. ಅವುಗಳೆಲ್ಲವೂ ಈ ಮುಂದೆ ಹೇಳುವ ಕ್ರಮದಿಂದ ತಿಳಿಯತಕ್ಕವುಗಳಾಗಿರುವುವು. ಅರ್ಥಾಪತ್ತಿಪ್ರಮಾಣವೆಂಬುವುದು ಶ್ರುತಾರ್ಥಾಪತ್ತಿ ಅರ್ಥಾರ್ಥಾಪತ್ತಿ ಎಂದು ಎರಡು ವಿಧವಾಗಿ ಇರುತ್ತದೆ. ಶ್ರುತಾರ್ಥಾಪತ್ತಿಯಲ್ಲಿ ಶಬ್ದವು ಪ್ರಮಾಣದಿಂದ ಗಮ್ಯವಾಗಿ ಅದರಿಂದ ಅರ್ಥವು ಬೋಧಿತವಾಗುತ್ತದೆ. ಅರ್ಥಾ

**ತರಸಿದ್ಧಾನಾಮರ್ಥಾನಾಮನಾದರಾದನುಪಾದಾನಂ ಆಕ್ಷೇ-ಪಾತ್ತತ್ಸಿದ್ಧೇಃ। ತೇ ಚಾರ್ಥಾ ಏವಮನುಸಂಧ್ಯೇಯಾಃ। ಪ್ರಥಮತೋ ಮಹತ್ತತ್ತ್ವಂ ಮಾಯಾಯಾಃ, ತದ್ಭಾವಾ-ಪನ್ನಮಾಯಾತೋಽಹಂಕಾರತತ್ವಂ, ತತಸ್ತಾದೃಶಾದಹಂ-ಕಾರಾತ್ಪಂಚತನ್ಮಾತ್ರಾಣಿ। ಸರ್ವೇಷಾಮೇಷಾಂ ತ್ರಿಗು-ಣಾತ್ಮಕಮಾಯಾಕಾರ್ಯತ್ವಾತ್ ತ್ರಿಗುಣಾತ್ಮಕತಾ। ತತ್ರ ಸತ್ತ್ವಗುಣಪ್ರಧಾನಾನಿ ಪಂಚಸೂಕ್ಷ್ಮಭೂತಾನಿ ಶ್ರೋತ್ರಾ-**

---

ರ್ಥಾಪತ್ತಿಯಲ್ಲಿ ಅರ್ಥವು ಮಾತ್ರವೇ ಗಮ್ಯವಾಗಿರುತ್ತದೆ. "ಪೀನೋ ದೇವದತ್ತೋ ದಿವಾ ನ ಭುಂಕ್ತೇ" ಎಂಬಲ್ಲಿ ಪೀನತ್ವವು ದೇವದತ್ತನಿಗೆ ದಿವಾ ಭೋಜನವಿಲ್ಲದಿದ್ದರೂ ಉಂಟಾಗಿ, ರಾತ್ರಿ ಭೋಜನವು ಆಕ್ಷೇಪ ಗಮ್ಯವಾಗಿರುವುದು. ಇದರಂತೆಯೇ ಇಲ್ಲಿಯೂ ಕೂಡ ಆಕ್ಷೇಪದಿಂದಲೇ ಆಯಾಯ ಅರ್ಥಗಳು ಗಮ್ಯವಾಗಿ ಇರುತ್ತವೆ. ಮೊದಲು ಮಾಯೆ ಯಿಂದ ಮಹತ್ತತ್ತ್ವವು ಉಂಟಾಗುವುದು. ವಿವರ್ತವಾದವನ್ನು ಆಶ್ರಯಿ ಸಿರುವುದರಿಂದ ಮಹತ್ತತ್ತ್ವಾಪನ್ನವಾದ ಮಾಯೆಯಿಂದಲೇ ಅಹಂಕಾ ರವೂ ಉತ್ಪತ್ತಿಯಾಗಿರುವುದು. ಈ ಅಹಂಕಾರದಿಂದ ಪಂಚತನ್ಮಾತ್ರ ಗಳು ಹುಟ್ಟುವುವು. ಇವುಗಳೆಲ್ಲವೂ ಸತ್ತ್ವರಜಸ್ತಮಸ್ಸೆಂಬ ಮೂರು ಗುಣ ಗಳುಳ್ಳ ಮಾಯಾಕಾರ್ಯವಾಗಿ ಇರುವ ಕಾರಣ ಇವುಗಳು ತ್ರಿಗುಣ ವುಳ್ಳವುಗಳಾಗಿಯೇ ಇರುತ್ತವೆ. ಅದರಲ್ಲಿ ಪಂಚಸೂಕ್ಷ್ಮಭೂತಗಳೂ ಸತ್ತ್ವಗುಣಪ್ರಾಧಾನ್ಯದಿಂದ ಇರುವುವುಗಳಾಗಿ ಶ್ರೋತ್ರವೇ ಮೊದಲಾದ ಜ್ಞಾನೇಂದ್ರಿಯಗಳಿಗೆ ಕಾರಣವಾಗಿ ಇರುತ್ತವೆ. ಇವುಗಳು ಬೇರೆಬೇರೆ

**ದೀನಿ ಜ್ಞಾನೇಂದ್ರಿಯಾಣಿ ಪೃಥಗ್ಜನಯಂತಿ, ಸಮುಚ್ಚಿತ್ಯ ಮನಃ, ರಜೋಗುಣಪ್ರಧಾನಾನಿ ಚ ತಾನಿ ಸೂಕ್ಷ್ಮಭೂತಾನಿ ಪಂಚಕರ್ಮೇಂದ್ರಿಯಾಣಿ ಪೃಥಕ್, ಸಮುಚ್ಚಿತ್ಯ ಪ್ರಾಣಂ। ತತಃ ತಮಃಪ್ರಧಾನಾಂ ಪೂಂಸಾಂ ಪಂಚೀಕರೋತಿ ಸೂಕ್ಷ್ಮಭೂತಾತ್ಮಿಕಾಂ। ತತಃ ಸ್ಥೂಲಾನಿ ಪಂಚಭೂತಾನಿ**

---

ಯಾಗಿ ಎಂದರೆ, ಐದು ಸೂಕ್ಷ್ಮಭೂತಗಳಿಂದ ಐದು ಜ್ಞಾನೇಂದ್ರಿಯಗಳು ಉತ್ಪತ್ತಿಯಾಗಿರುವವು. ಪಂಚಭೂತಗಳ ಸೂಕ್ಷ್ಮ ಸಮಷ್ಟಿ ರೂಪದಿಂದ ಮನಸ್ಸು ಉತ್ಪತ್ತಿಯಾಗುವುದು.

ಈ ಪಂಚಸೂಕ್ಷ್ಮಭೂತಗಳು ರಜೋಗುಣಪ್ರಾಧಾನ್ಯದಿಂದ ಇರುವಾಗ ಪಂಚಕರ್ಮೇಂದ್ರಿಯಗಳೂ ಬೇರೆಬೇರೆಯಾಗಿ ಉತ್ಪತ್ತಿಯಾಗುವುವು. ರಜೋಗುಣಪ್ರಧಾನವಾದ ಈ ಪಂಚಸೂಕ್ಷ್ಮಭೂತಗಳ ಸಮಷ್ಟಿಯಿಂದ ಪ್ರಾಣವು ಉಂಟಾಗುವುದು. ಪಂಚಸೂಕ್ಷ್ಮಭೂತಗಳು ತಮಃಪ್ರಧಾನವಾಗಿರುವಾಗ ಅದನ್ನು ಪಂಚೀಕರಣಮಾಡುವರು. ಪ್ರತಿಯೊಂದು ಭೂತದ ಅಂಶವನ್ನು ಐದು ಪ್ರಕಾರವಾಗಿ ವಿಭಾಗಮಾಡಿ, ಅವುಗಳಲ್ಲಿ ಒಂದು ಭಾಗಕ್ಕೆ ಉಳಿದ ಭೂತದ ಒಂದು ಭಾಗವನ್ನು ಸೇರಿಸುವುದು. ಇದರಿಂದ ಪ್ರತಿಯೊಂದರಲ್ಲಿಯೂ ಒಂದು ಭೂತದ ಅಂಶವು ಅಧಿಕವಾಗಿಯೂ ಬಾಕಿಯವು ಕಡಿಮೆಯಾಗಿಯೂ ಸೇರುವುವು. ಹೆಚ್ಚಾಗಿರುವ ಭೂತ ಅಂಶದ ಜ್ಞಾನವನ್ನು ಅನುಸರಿಸಿ ಆಯಾಯ ಸ್ಥೂಲ ಭೂತಗಳು ಉತ್ಪನ್ನವಾಗುವುವು. ಪಂಚಸ್ಥೂಲಭೂತಗಳಾದ ಪೃಥಿವಿ, ಅಪ್ಪು, ವಾಯು, ತೇಜಸ್ಸು, ಆಕಾಶ ಎಂಬವುಗಳ ಸೃಷ್ಟಿಯೂ ಆದ

ಯುಸ್ಸರ್ವೇ। ತೇಭ್ಯೋಽನ್ನಂ ತತಃ ಸ್ಥಾವರ-

ಭವಂತಿ। ತೇಭ್ಯ ಓಷಧಿವನಸ್ಪತಯ ಇತಿ। ತೇಭ್ಯೋಽನ್ನಂ ತತಃ ಸ್ಥಾವರಯುತಜಂಗಮಃ ಪ್ರಪಂಚೋ ಭವತಿ। ತನ್ನಿದಮಸಂಗತಂ। ಅನ್ಯೋನ್ಯಾಶ್ರಯದೋಷಾತ್। ಓಷಧ್ಯಾದಯಃ ಅನ್ನಾನ್ ಓಷಧೀಭ್ಯೋಽನ್ನಮಿತಿ ಇತಿ

ನಂತರ ಇವುಗಳಿಂದ ಮೂಲಿಕೆಗಳೂ ವನಸ್ಪತಿಗಳೂ ಉಂಟಾಗುತ್ತವೆ. ಈ ಓಷಧಿ ವನಸ್ಪತಿಗಳಿಂದ ಅನ್ನವು ಸೃಷ್ಟವಾಗಿರುತ್ತದೆ. ಅನ್ನದಿಂದ ಸ್ಥಿರವಾದ ಮತ್ತು ಸಂಚರಿಸುವ ಪ್ರಾಣಿಗಳ ಸೃಷ್ಟಿಯು ಐದನೆಯ ವಿಧವಾಗಿರುತ್ತದೆ. ಸತ್ತ್ವಗುಣಪ್ರಧಾನವಾದ ಸೂಕ್ಷ್ಮಭೂತದಿಂದ ಜ್ಞಾನೇಂದ್ರಿಯಗಳು, ರಜೋಗುಣಪ್ರಧಾನವಾದ ಸೂಕ್ಷ್ಮಭೂತದಿಂದ ಕರ್ಮೇಂದ್ರಿಯಗಳು, ತಮೋಗುಣಪ್ರಧಾನವಾದ ಸೂಕ್ಷ್ಮಭೂತಗಳ ಪಂಚೀಕರಣದಿಂದ ಸ್ಥೂಲವಾದ ಪಂಚಭೂತಗಳು ಎಂಬ ಈ ಪ್ರಕಾರವಾಗಿ ಮೂರುವಿಧವಾದ ಸೃಷ್ಟಿಯಾದನಂತರ ಇವುಗಳಿಂದ ಅನ್ನರೂಪವಾದ ಓಷಧಿ ವನಸ್ಪತಿಗಳು ನಾಲ್ಕನೆಯ ಸೃಷ್ಟಿಕ್ರಮವು ಪ್ರಾಣಿಗಳ ಸೃಷ್ಟಿಯು ಐದನೆಯದಾಗಿರುತ್ತದೆ.

ಬೀಜರೂಪವಾದ ಅನ್ನದಿಂದ ಓಷಧಿವನಸ್ಪತಿಗಳೂ ಓಷಧಿವನಸ್ಪತಿಗಳಿಂದ ಅನ್ನವೂ ಎಂದು ಅನ್ಯೋನ್ಯಾಶ್ರಯದೋಷವು ಪ್ರಸಕ್ತವಾಗುವುದೆಂದು ಆಕ್ಷೇಪವು ಉಂಟಾಗುವುದು. ಸಾಂಬದೇವನು ಮೊದಲು ಪಂಚ

ಜಂಗಮಃ ಪ್ರಪಂಚೋ ಭವತಿ। ಕಾರಣಂ
ಭವತ್ಯತ್ರ ಚೋಪಾದಾನಮಾಕಾಶಾದೀನಿ।

---

ಚೇನ್ನ। ಯತಃ ಪ್ರಥಮತಂ ಸಾಂಬೋऽನಪೇಕ್ಷ್ಯೈವಾನ್ನಂ
ಪಂಚಭೂತೈರೋಷಧಿವನಸ್ಪತೀನಸೃಜತ್। ತತಃ ಪರಂ-
ಪರಯಾ ಬೀಜತೋऽನ್ನಕೃತಾತ್ಸ್ಥಾವರಜಙ್ಗಮಪರಂಪರಾಃ
ಸೃಜತೀತಿ। ಆಕಾಶಾದೀನಿ ಪಂಚಭೂತಾನಿ ಪಂಚೀಕೃತಾನಿ
ಉಪಾದಾನಕಾರಣಾನಿ ಸ್ಥಾವರಜಂಗಮಾತ್ಮಕಸ್ಯ ಜಗತ ಇತಿ।
ಸಂಪಿಂಡಿತೋऽರ್ಥಃ ಸ್ಪಷ್ಟೋऽಕ್ಷರಾರ್ಥಃ। ಅಥಾತಃ
ಶಾಸ್ತ್ರತತ್ತ್ವಮುದ್ವೈತಂ ಮೋಕ್ಷಸಿಧ್ಯೈ ವದಂತೀ ಬಂಧಸ್ಯ

---

ಭೂತಗಳನ್ನು ಸೃಷ್ಟಿಮಾಡಿದಾಗ ಅನ್ನವನ್ನು ಕಾರಣವಾಗಿ ಸ್ವೀಕರಿಸ ಲಿಲ್ಲ. ಕೇವಲವಾದ ಪಂಚಭೂತಗಳಿಂದಲೇ ಓಷಧಿ ವನಸ್ಪತಿಗಳನ್ನು ನಿರ್ಮಿಸಿರುವನು. ಅದರಿಂದಲೇ ಕ್ರಮವಾಗಿ ಬೀಜಗಳಿಂದ ಅನ್ನವೂ, ಅನ್ನದಿಂದ ಸ್ಥಿರಚರರೂಪವಾದ ಪ್ರಾಣಿಗಳೂ ಸೃಷ್ಟವಾಗಿರುತ್ತವೆ. ಸ್ಥಾವ ರಜಂಗಮಾತ್ಮಕವಾದ ಈ ಪ್ರಪಂಚದ ಉತ್ಪತ್ತಿಗೆ ಆಕಾಶವೇ ಮೊದ ಲಾದ ಪಂಚಭೂತಗಳು ಪಂಚೀಕೃತಗಳಾಗಿ ಉಪಾದಾನಕಾರಣವಾಗಿರು ತ್ತವೆ. ಸೃಷ್ಟಿಕ್ರಮವು ಈ ಪ್ರಕಾರವಾದ ರೀತಿಯಿಂದ ಇರುತ್ತದೆ ಎಂದು ಸ್ಪಷ್ಟವಾಗಿ ವಿವರಿಸಿರುತ್ತದೆ.

ಈ ಶಾಸ್ತ್ರದ ತತ್ತ್ವವು ಅದ್ವೈತ ವೇದಾಂತದ ತತ್ತ್ವವನ್ನು

ಅಖಂಡೋಽಪಿ ದೀವ್ಯತೇಽಯಮೇವ ಹೃ-
ತ್ಕೋಶೇಷು ಪರಿಚ್ಛಿನ್ನಜೀವತ್ವೇನ ವ್ಯಾಪ್ತೋ-

ಚ ಮಿಥ್ಯಾತ್ವಂ ಬೋಧಯಂತೀ ಅಖಿಲಜೀವಾನಾಂ ತಾದೃ-
ಕ್ಪರಬ್ರಹ್ಮಭಿನ್ನತ್ವಮೌಪಾಧಿಕಂ ಭೇದಂ ಚಾಹ । ಅಖಂ-
ಡೋಽಪಿ........ವಸುಂಧರಾಮಿತಿ । ಹೃತ್ಕೋಶಪರಿಚ್ಛಿನ್ನ
ಇತಿ । ಹೃತ್ಕೋಶೋ ಯಸ್ಯ ಸೂಕ್ಷ್ಮಕಾರಣಶರೀರವಾಚಿನಃ
ಪಂಚಪ್ರಾಣಮನೋಬುದ್ಧಿದಶೇಂದ್ರಿಯಸಮುದಾಯಸ್ಯ

ಅವಲಂಬಿಸಿರುತ್ತದೆ. ಮೋಕ್ಷವೂ ಕೂಡ ಅದ್ವೈತಭಾವವೇ ಆಗಿರು
ತ್ತದೆ. ಬಂಧವು ಮಿಥ್ಯಾ ಆಗಿರುವುದು ಎಂದು ಬೋಧಿಸುವ ಈ
ಶಾಸ್ತ್ರವು ಜೀವರೆಲ್ಲರೂ ಆ ಪ್ರಕಾರವಾದ ಮಹಿಮೆಯುಳ್ಳ ಪರಬ್ರಹ್ಮ
ನಿಂದ ಬೇರೆಯಾಗಿರುವುದು ಉಪಾಧಿಯಿಂದ ಉಂಟಾದ ಭೇದದಿಂದಲೇ
ಎಂದು ಬೋಧಿಸುವುದು. ಇದೇ ಅಭಿಪ್ರಾಯವನ್ನು
"ಅಖಂಡೋಪಿ" ಎಂಬ ವಾಕ್ಯದಿಂದ ಬೋಧಿಸಿರುತ್ತದೆ. ಮಹಾ
ಪ್ರಮಾಣದಿಂದ ಇರುವ ಆಕಾಶವು ಘಟವೇ ಮೊದಲಾದವುಗಳಲ್ಲಿ
ಪರಿಚ್ಛಿನ್ನಭಾವದಿಂದ ಇರುವಂತೆ, ಸುಷುಪ್ತಿಕಾಲದಲ್ಲಿ ಪಂಚಪ್ರಾಣ
ವಾಯುಗಳು, ಮನಸ್ಸು, ಪಂಚಜ್ಞಾನೇಂದ್ರಿಯಗಳು ಮತ್ತು ಪಂಚ
ಕರ್ಮೇಂದ್ರಿಯಗಳು ಬುದ್ಧಿ ಎಂಬ ಹದಿನೇಳು ಪದಾರ್ಥಗಳ ಸಮು
ದಾಯವು ಸೂಕ್ಷ್ಮಶರೀರವೆನಿಸಿಕೊಂಡು ಕಾರಣಶರೀರವಾದ ಅಜ್ಞಾನ

ತಿ ಚಾಕಾಶವತ್ಸರ್ವಂ । ಅಲಂಚಕಾರ ನಕ್ಷ-
ತ್ರಾದಿಭಿರಾಕಾಶಂ । ಶೈಲಕಾನನದ್ರುಮಾದಿ-

---

ಸುಷುಪ್ತಿಕಾಲೇ, ತೇನ ಪರಿಚ್ಛಿನ್ನಸ್ಯ ಮಹಾಕಾಶಸ್ಯೇವ
ಘಟಾದಿನೇತ್ಯರ್ಥಃ । ಏವಂ ಪ್ರಪಂಚಸೃಷ್ಟಿಂ ಜೀವಾನಾಂ
ಭೋಗಾಯ ಬಂಧರೂಪಾಯ ಪ್ರತಿಪಾದ್ಯ ತಾದೃಗ್ಬಂಧ-

---

ದಲ್ಲಿ ಪರಿಚ್ಛಿನ್ನಭಾವದಿಂದ ಇರುವುದು. ಜೀವನು ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರಗಳ ಉಪಾಧಿಯಿಂದ ಪರಬ್ರಹ್ಮನಿಗಿಂತ ಬೇರೆಯಾಗಿ ಇರುವನು. ಈ ದೇವನೇ ಉಪಾಧಿಗತವಾದ ಜೀವಭಾವ ದಿಂದ ಇರುವ ಕಾಲದಲ್ಲಿ ಪರಿಚ್ಛಿನ್ನಭಾವದಿಂದ ಇರುವನು. ಎಂದರೆ, ಅಖಂಡನಾಗಿರುವ ಪರಬ್ರಹ್ಮನೇ ಪರಿಚ್ಛಿನ್ನಭಾವದಿಂದ ಆಯಾಯ ಪ್ರಾಣಿಗಳ ಹೃತ್ಕೋಶಗಳಲ್ಲಿ ಪ್ರಕಾಶಿಸುತ್ತಿರುವನು. ಆಕಾಶದಹಾಗೆ ಎಲ್ಲವನ್ನೂ ವ್ಯಾಪಿಸಿಕೊಂಡು ಇರುವನು. ನಕ್ಷತ್ರವೇ ಮೊದಲಾದವುಗಳು ಆಕಾಶದಲ್ಲಿ ಅಲಂಕಾರವಾಗಿರುವಹಾಗೆ ಭೂಮಿಯನ್ನು ಬೆಟ್ಟ, ಕಾಡು, ಮರಗಳು ಇವೇ ಮೊದಲಾದವುಗಳಿಂದ ಅಲಂಕಾರಮಾಡಿ ರುವನು.

ಪ್ರಪಂಚ ಸೃಷ್ಟಿಯು ಜೀವರುಗಳ ಭೋಗಕ್ಕಾಗಿಯೂ, ಮತ್ತು ಜೀವರುಗಳ ಬಂಧಕ್ಕಾಗಿಯೂ ಉಂಟಾಗಿರುವುದು ಎಂದು ಹೇಳಿರು ತ್ತದೆ. ಬಂಧವು ನಿವೃತ್ತವಾಗುವುದಕ್ಕಾಗಿ ಶಿಲ್ಪವೇದವು ಪ್ರಕಟಿತ

ಭಿತ್ತ್ವಾ ವಸುಂಧರಾಂ । ನಾನಾರ್ಥಭಾಜಂ
ನಾಚಗ್ಂ ಶಿಲ್ಪವಿಚಿತ್ರಸುಂದರಾನುಕ

---

ನಿವೃತ್ತಯೇ ಶಿಲ್ಪವೇದಪ್ರಕಟನಂ ಪ್ರಕೃತಮಾಹ । ನಾನಾ-
ರ್ಥೇತಿ । ಯತೋಽಯಂ ವೇದಃ ನಾತಃ ಉತ್ಪಾದ್ಯತಾ,
ನಿತ್ಯೋ ಹಿ ಸಃ ಅತೋಽಕರೋದಿತಿ ನೋತ್ಪಾದ್ಯತಾವಾದೀ-
ಶಬ್ದಃ ಅಪಿ ತು ಪ್ರಕಾಶನವಾದೀ । ತದಿದಮುಕ್ತಂ ಸಂಗ್ರಹ-
ಸೂಕ್ತೌ । ಪ್ರಕಟಯತಿತರಾಮಿತಿ । ಪ್ರಕಟಿತಪೂರ್ವಾ ಚ
ನಾನಾರ್ಥತಾ ಶಿಲ್ಪವಿದ್ಯಾಯಾಃ । ವಿವಿಧಚಿತ್ರೈರ್ಜಡಾನಾ-

---

ವಾಗಿರುವುದು. ಶಿಲ್ಪವೆಂಬುವುದು ವೇದವಾಗಿರುವ ಕಾರಣ ಉತ್ಪತ್ತಿ
ಯನ್ನು ವೇದವು ಹೊಂದುವುದಿಲ್ಲ. ವೇದವು ಯಾವಾಗಲೂ ನಿತ್ಯ
ವಾಗಿರುವುದು. ಅನೇಕಾರ್ಥವನ್ನು ಬೋಧಿಸುವ ವೇದವು ಕೃತಿವಿಷಯ
ವಾಗಿರುವುದಿಲ್ಲ. ಉತ್ಪತ್ತಿವಾದವನ್ನು ಅಕರೋತ್ ಎಂಬ ಶಬ್ದವು
ಬೋಧಿಸುವುದಿಲ್ಲ. ಅಕರೋತ್ ಎಂಬ ಶಬ್ದದಿಂದ ವೇದವು ಪ್ರಕಾಶಿತ
ವಾಗಿರುತ್ತದೆ ಎಂಬ ಅರ್ಥವು ಸಿದ್ಧವಾಗುವುದು. ಸಂಗ್ರಹಸೂಕ್ತಿ
ಯಲ್ಲಿ ಈ ಅಭಿಪ್ರಾಯದಿಂದಲೇ ಪ್ರಕಟಯತಿತರಾಂ ಎಂದು ಉಕ್ತವಾ
ಗಿರುತ್ತದೆ. ಶಿಲ್ಪವಿದ್ಯೆಯೂ ಕೂಡ ಅನೇಕವಾದ ಅರ್ಥವನ್ನು ಬೋಧಿ
ಸುವುದರಿಂದ ಶಿಲ್ಪವಿದ್ಯೆಯು ಬಹಳ ಜ್ಞಾನಭೇದಗಳುಳ್ಳದ್ದಾಗಿರು
ವುದು ಎಂದು ನಾನಾರ್ಥತ್ವವೂ ಶಿಲ್ಪವಿದ್ಯೆಗೆ ಪ್ರತಿಪಾದಿತವಾಗಿರುತ್ತದೆ.

ರೋತ್ । ಏವಮೇವಾಲಂಕೃತವಾ಼ ಪದಾ-
ರ್ಥಾನಿ ವೈ ಸರ್ವಾಣಿ । ಸರ್ವಮೇತದ್ಭವತಿ

ಮಪಿ ಮನೋಹಾರಿಣೀಮೈಕಾಗ್ರ್ಯಕಾರಿಣೀಂ ತತಸ್ಸುಸುಂದ-
ರಾಮಿತಿ ಸರ್ವಶಾಸ್ತ್ರೇಭ್ಯೋಽತಿಶಯಃ ಪ್ರಕಾಶಿತಃ । ಪದಾ-
ರ್ಥಾನೀತಿ ಕ್ಲೀಬತಾಚ್ಛಾಂದಸೀ । ಮೃದ್ವೃಕ್ಷಾದಿವಸ್ತೂನಿ
ದೇವಾಲಯಾದಿರೂಪತಯಾ ತಕ್ಷಣಾದಿಕರ್ಮಭಿರಲಂಕ-
ರೋತಿ । ಆಗೋಪಾಲಿಂಗನಂ ಭಕ್ತಿಂ ಜನಯಿತುಮಿತಿ
ತದರ್ಥಃ । ಸರ್ವಮಿದಂ ವಿಶ್ವಕೃತಃ ಶಿಲ್ಪಮಿತಿ ಉಕ್ತಾ-

ಶಿಲ್ಪವಿದ್ಯೆಯು ಅನೇಕವಿಧವಾದ ಚಮತ್ಕಾರಗಳಿಂದ ದಡ್ಡರಿಗೂ ಕೂಡ ಆಶ್ಚರ್ಯವನ್ನೂ ಚಿತ್ತೈಕಾಗ್ರ್ಯತೆಯನ್ನೂ ಉಂಟುಮಾಡುವುದು. ಆದ್ದರಿಂದಲೇ ಬಹಳ ಮನೋಹರವಾಗಿರುವುದು. ಇದಕ್ಕಾಗಿಯೇ ಈ ಶಾಸ್ತ್ರವು ಇತರ ಎಲ್ಲಾ ಶಾಸ್ತ್ರಗಳಿಗಿಂತಲೂ ಅತಿಶಯವಾಗಿರುವುದು. ಪದಾರ್ಥಾನಿ ಎಂದು ನಪುಂಸಕಲಿಂಗವನ್ನು ಹೇಳಿರುವುದು ವೈದಿಕ ಪ್ರಯೋಗವಾಗಿರುತ್ತದೆ. ಮಣ್ಣು, ಕಲ್ಲು, ಮರ ಎಂಬ ಇವೇ ಮೊದಲಾದ ವಸ್ತುಗಳನ್ನು ಕತ್ತರಿಸುವುದೇ ಮೊದಲಾದ ಕರ್ಮಗಳಿಂದ ದೇವಾಲಯವೇ ಮೊದಲಾದ ರೂಪದಿಂದ ಅಲಂಕಾರಮಾಡುವುದು ಶಿಲ್ಪವಾಗಿರುತ್ತದೆ. ಗೊಲ್ಲರಹೆಂಗಸರೇ ಮೊದಲಾದವರು ಆಲಿಂಗನದಿಂದ ಭಕ್ತಿಯನ್ನು ಹೊಂದುವಂತೆ ದೇವಾಲಯಾದಿಗಳಿಂದ ಭಕ್ತಿಯುದಯಿಸುವುದು.

ವಿಶ್ವಕೃದಃ ಶಿಲ್ಪಂ। ಯದಾ ತದಾಭವಜ್ಜಗ-
ದ್ವಿಜ್ಞಾನಶೂನ್ಯಗ್ಂ ಸೋಽಕಾಮಯತಾ-

---

ಥೋಽಪಸಂಹಾರಃ ಅರ್ಥಾಂತರೇ ಪ್ರವರ್ತಿಷ್ಯಮಾನೇ
ಜಾಗರೂಕತಾಯೈ ಕೀರ್ತ್ಯತೇ । ಸುಗಮಮನ್ಯತ್ ।
ಯದುಕ್ತಂ ಸಂಗ್ರಹಸೂಕ್ತೌ। ವಿಜ್ಞಾನಂ ದಿತ್ಸುರೇಭ್ಯಃ
ಮೋಹಿತಜನೇಭ್ಯ ಇತಿ ಜಗತೋಽಜ್ಞಾನಂ ತನ್ನಿವರ್ತಕ-
ಜ್ಞಾನಂ ತದರ್ಥಂ ಭಗವತಃ ಪ್ರವೃತ್ತಿವಿಶೇಷಶ್ಚ।ತಾನಿಮಾ

---

ಇವೆಲ್ಲವೂ ವಿಶ್ವಕರ್ತನಾದ ಸಾಂಬನ ಶಿಲ್ಪವಾಗಿರುತ್ತದೆ ಎಂದು ತಿಳಿಸುವುದಕ್ಕಾಗಿಯೇ "ಸರ್ವಮೇತದ್ಭವತಿ ವಿಶ್ವಕೃತಃ ಶಿಲ್ಪಂ" ಎಂದು ಸೂತ್ರದಲ್ಲಿ ಉಕ್ತವಾಗಿರುವುದು. ಈ ಪ್ರಕಾರವಾಗಿ ಹೇಳಿರುವುದರಿಂದ ಶಿಲ್ಪವ್ಯತಿರಿಕ್ತವಾದ ಬೇರೆಯ ಅರ್ಥವು ಇರುವುದೆಂಬ ತಿಳುವಳಿಕೆಯು ಪರಿಹೃತವಾಗುತ್ತದೆ. ಸಂಗ್ರಹಸೂಕ್ತಿಯಲ್ಲಿ "ವಿಜ್ಞಾನಂ ದಿತ್ಸುರೇಭ್ಯಃ ಮೋಹಿತಜನೇಭ್ಯಃ" ಅಜ್ಞಾನದಿಂದ ತುಂಬಿರುವ ಜನ್ಮವುಳ್ಳ ಜೀವರಿಗೂ ಕೂಡ ವಿಜ್ಞಾನವನ್ನು (ಶಿಲ್ಪಶಾಸ್ತ್ರಜ್ಞಾನವು ವಿಜ್ಞಾನವೆನಿಸುವುದು) ಸಾಂಬನು ಅನುಗ್ರಹಿಸಲು ಇಚ್ಛೆಯುಳ್ಳವನಾಗಿರುವನು ಎಂದು ಹೇಳಿರುತ್ತದೆ. ಜಗದ್ವಿಷಯಕವಾದ ಅಜ್ಞಾನವನ್ನು ಜ್ಞಾನವು ನಾಶಪಡಿಸುವುದು. ಇದಕ್ಕಾಗಿಯೇ ಪೂಜ್ಯನಾದ ಸಾಂಬಮೂರ್ತಿಯ ಪ್ರಯತ್ನವು ವಿಶೇಷವಾಗಿರುವುದು.

ತ್ಮಾನಂ ಪಂಚಾಸ್ಯಂ । ತದೈವಾವಿರಾಸೀತ್ಪ್ರ-
ವೃತ್ತ್ಯೈ । ತಸ್ಯೈವ ತೇಜೋಽಂಶಾದಭವನ್

ಪದಾರ್ಥಾನ್ನಿವೃಣೋತಿ । ಯದಾ ತದಾ ..ಅಧಿಷ್ಠಾತಾಽಹಂ
ಕರ್ಮಣಃ ಸಕಲಸ್ಯ ಯಜ್ಞರೂಪ ಇತಿ । ಅತ್ರೈವಮನ್ವ-
ಯೋಽವಸೇಯಃ । ಯದಾ ಜಗತ್ ವಿಜ್ಞಾನಶೂನ್ಯಮಭ-
ವತ್ತದಾ ಸ ಆತ್ಮಾನಂ ಪಂಚಾಸ್ಯಮುಕಾಮಯತ । ತದೈವಾ-
ವಿರಾಸೀತ್ಪಂಚಾಸ್ಯರೂಪಃ । ಪ್ರವೃತ್ತ್ಯೈ ಜಗತ ಇತಿ ಶೇಷಃ ।
ಸ ಕಿಮೇಕಮೇವ ಸ್ವಾತ್ಮಾನಂ ಪಂಚಧಾ ವ್ಯಭಜತ್ ?
ನೇತ್ಯಾಹ । ತಸ್ಯೈವ ತೇಜೋಽಂಶಾದಿತಿ । ಪಂಚಾಸ್ಯ-

ಈ ಪ್ರಕಾರವಾದ ಅಭಿಪ್ರಾಯವನ್ನು ವಿವರವಾಗಿ ತಿಳಿಸುವುದ ಕ್ಕಾಗಿಯೇ "ಯದಾ ತದಾ........ಅಧಿಷ್ಠಾತಾಽಹಂ ಕರ್ಮಣಸ್ಸಕಲಸ್ಯ ಯಜ್ಞರೂಪಃ" ಎಂದು ಸೂತ್ರವು ಪ್ರವೃತ್ತವಾಗಿರುವುದು. ಜಗತ್ತೆಂಬು ವುದು ವಿಜ್ಞಾನಶೂನ್ಯವಾದ ಕಾಲದಲ್ಲಿ ಈ ದೇವನು ತನ್ನನ್ನು ಐದು ವಿಧವಾದ ರೂಪವುಳ್ಳವನನ್ನಾಗಿ ನಿರ್ಮಿಸಲು ಸಂಕಲ್ಪಮಾಡಿದನು. ಅಜ್ಞಾನದಿಂದ ಇರುವ ಜಗತ್ತಿನ ಪ್ರವೃತ್ತಿಯು ಉಂಟಾಗುವುದಕ್ಕಾಗಿ ಆಕ್ಷಣದಲ್ಲಿಯೇ ಒದು ರೂಪವುಳ್ಳವನಾದನು. ಇವನು ತನ್ನ ಒಂದು ರೂಪದಿಂದ ಐದು ರೂಪವುಳ್ಳವನಾಗಲಿಲ್ಲ. ಆದರೆ ಇವನ ತೇಜಸ್ಸಿನ ಅಂಶವು ಐದು ರೂಪಗಳನ್ನು ಹೊಂದಿ, ಮನು, ಮಯ, ತ್ವಷ್ಟಾ,

ಬ್ರಹ್ಮಾಣೋ ಮನುರ್ಮಯಸ್ತ್ವಷ್ಟಾ ಶಿಲ್ಪೀ
ವಿಶ್ವಜ್ಞ ಇತಿ ಪಂಚ । ತಾನೇವಗ್‌ಂ ಹೋ-
ವಾಚ ವಿಶ್ವಕರ್ತಾ। ಪ್ರವರ್ತಯತ ಲೋಕಂ
ಪಂಚಕರ್ಮಭಿರಿತಿ । ಪ್ರವರ್ತತ ಇತ್ಯೇತ್ಯೈಃ

ಸ್ವರೂಪಂ ತನ್ನಾಮ ಚ ನಿರ್ದಿಶತಿ । ಮನುರಿತ್ಯಾದಿನಾ ।
ಏತನ್ನಾಮಕಾಃ ಪಂಚಬ್ರಹ್ಮಾಣೋಽಭವನ್ನಿತ್ಯನ್ವಯಃ ।
ವಿಶ್ವಕರ್ತಾ ಪಂಚಕರ್ಮಭಿರ್ಲೋಕಂ ಪ್ರವರ್ತಯತ
ಇತ್ಯೇವಂ ತಾನುವಾಚ ಹೇತಿ ಅನ್ವಯಃ । ಹೇತ್ಯೈತಿ-
ಹ್ಯಾರ್ಥೋ ನಿಪಾತಃ । ಶ್ರುತ್ಯಾದೀನೇವಮರ್ಥಾವಗಮ-

---

ಶಿಲ್ಪೀ, ವಿಶ್ವಜ್ಞ ಎಂಬ ಹೆಸರುಗಳಿಂದ ಪ್ರಸಿದ್ಧಿಯನ್ನು ಹೊಂದಿ ಇರುವುದು. ಈ ಐದು ಜನರೇ ಪಂಚಬ್ರಹ್ಮರಾಗಿರುವವರು. ವಿಶ್ವಕರ್ತನಾದ ಸಾಂಬನು ಈ ಐದು ಜನರಿಗೂ ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹ ಎಂಬ ಐದು ಕರ್ಮಗಳಿಂದ ಈ ಲೋಕವನ್ನು ವೃದ್ಧಿಯಾಗುವಂತೆ ಮಾಡಿರಿ ಎಂದು ಅನುಗ್ರಹವನ್ನು ಮಾಡಿದನು. ಹ ಎಂಬುವುದು ಐತಿಹ್ಯವನ್ನು ಬೋಧಿಸುವ ನಿಪಾತವು. ಐತಿಹ್ಯವೆಂದರೆ ಪೂರ್ವ ಕಾಲದಲ್ಲಿ ನಡೆದಿರುವ ವರ್ತಮಾನಸಂಗ್ರಹವು ಕಥಾರೂಪದಿಂದ ಇರುವುದು. ಇದೇ ರೀತಿಯಾದ ಅರ್ಥವನ್ನು ಬೋಧಿಸುವ ಶ್ರುತಿಯೇ ಮೊದಲಾದವುಗಳು ಅನೇಕವಾಗಿರುತ್ತವೆ. ಅವುಗಳನ್ನು ಬೇರೆಯಕಡೆ

**ಪಂಚಭಿರಿತಿ ಪ್ರಪಂಚೋ ಭವತಿ। ಯಜ್ಞ ಏವೇದಂ ಕರ್ಮ ಯಜ್ಞಃ ಕರ್ಮೈವ।**

**ಕಾ ದ್ಯೋತಯತಿ। ತೇಽನ್ಯತೋಽವಸೇಯಾಃ। ಪ್ರಸಂಗಾಲ್ಲೋಕೇ ಪ್ರಪಂಚಶಬ್ದಪ್ರವೃತ್ತಿಮಾಹ ಸಕಾರಣಾಂ। ಏತೈಃ ಪಂಚಭಿಃ ಪ್ರವರ್ತತ ಇತಿ ಪ್ರಪಂಚ ಇತಿ। ಸಕಲಸ್ಯ ಕರ್ಮಣೋಽಹಂ ಯಜ್ಞರೂಪೋಽಧಿಷ್ಠಾತೇತಿ ವರ್ತಿಷ್ಯತೇ। ತಸ್ಯ ವಾಕ್ಯಸ್ಯಾರ್ಥಂ ಬುಬೋಧಯಿಷುಃ ತದ್ಘಟಕಂ ಯಜ್ಞಪದಾರ್ಥಮಾಹ। ಯಜ್ಞ ಏವೇದಂ ಕರ್ಮೇತಿ। ಯದಿದಂ ಲೋಕಪ್ರವರ್ತನಂ ಕರ್ಮ ತದ್ಯಜ್ಞ ಏವೇತ್ಯ-**

ನೋಡಿ ತಿಳಿಯಬಹುದು. ಸರ್ಗ, ಸ್ಥಿತಿ, ಲಯ, ತಿರೋಧಾನ, ಅನುಗ್ರಹ ವೆಂಬ ಐದು ವಿಧವಾದ ಕರ್ಮಗಳಿಂದ ಪ್ರವೃತ್ತವಾದ ಕಾರಣ ಈ ಜಗತ್ತಿಗೆ ಪ್ರಪಂಚವೆಂದು ಹೆಸರು ಬಂದಿರುತ್ತದೆ. ಈ ಐದು ವಿಧವಾದ ಕರ್ಮಗಳಿಗಿಂತಲೂ ಬೇರೆಯಾಗಿ ನಾನು ಅಧಿಷ್ಠಾತೃವಾಗಿರುವೆನು ಮತ್ತು ಯಜ್ಞರೂಪದಿಂದ ಇರುವೆನು ಎಂದು ವಿಶ್ವಕರ್ತನಾದ ಸಾಂಬನ ಪ್ರತ್ಯುತ್ತರವು ಇರುವುದು. ಈ ಶಿಲ್ಪವೆಂಬ ಕರ್ಮವೂ ಕೂಡ ಯಜ್ಞವಾಗಿಯೇ ಇರುವುದು. ಇದರಿಂದ ಯಜ್ಞರೂಪೋ ಅಧಿಷ್ಠಾತಾ ಎಂಬ ವಾಕ್ಯದಲ್ಲಿರುವ ಯಜ್ಞಪದದ ಅರ್ಥವು ಲೋಕಪ್ರವರ್ತಕರೂಪವಾದ ಕರ್ಮವೆಂದು ತಿಳಿಯತಕ್ಕದ್ದು.

ಸ್ವಯಃ । ಇದಮುತ್ರಾಕೂತಂ । ಕಥಂ ನು ಭಗವಾನ್ ನಃ ಸೃಷ್ಟ್ವಾ ಭಗವದರ್ಥರ್ಂಯಜ್ಞಾನುಷ್ಠಾನೇಚೋದಯನ್ ಘೋರೇ ಕರ್ಮಾಂತರೇ ಯೋಜಯೇತ್ ಸರ್ವಾನುಗ್ರ-ಹೈಕಪರಾಯಣಃ ಇತ್ಯೇವಂ ಸೃಷ್ಟಾನಾಂ ಶಂಕಾ ಸಂಭಾವ್ಯೇತ । ಮಾನಾಪ್ಯೇವಂ ಶಂಕಿ । ಯತ ಇದಂ ಕರ್ಮಯಜ್ಞರೂಪಮೇವೇತಿ । ನನ್ವಿದಂ ಕರ್ಮ ಯಜ್ಞರೂಪಮೇವೇತಿ ವಚನಾತ್ ಮುಖ್ಯಯಜ್ಞತ್ವಂ ನಾಸ್ತೀತ್ಯವಗಮಿತಂ ವಿವಕ್ಷಿತಸ್ಯ ಕರ್ಮಣಃ । ಅತೋ ಮುಖ್ಯಂ ಯಜ್ಞಂ ವಿಧಾತುಂ ಪಾರಯಮಾಣಾ ಔಪ-ಚಾರಿಕಂ ಯಜ್ಞಂ ಕುತೋ ಹೇತೋರನುತಿಷ್ಠೇಯುಃ

---

ಪೂಜ್ಯನಾದ ಸಾಂಬನು ನಮ್ಮನ್ನು ಸೃಷ್ಟಿಮಾಡಿ, ಪ್ರಭುವೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಆ ದೇವನ ಪ್ರೀತಿಯು (ಸಂಪಾದಿತ ವಾಗುವ) ಉಂಟಾಗುವ ಯಜ್ಞರೂಪವಾದ ಕರ್ಮವನ್ನು ಮಾಡುವುದ ರಲ್ಲಿ ನಮ್ಮನ್ನು ಪ್ರೇರಿಸದೆ ಇರುವನು ಹಾಗಾದರೆ, ಎಲ್ಲರಿಗೂ ಅನುಗ್ರಹ ವನ್ನು ಮಾಡುವುದರಲ್ಲಿ ನಿರತನಾದ ಈ ದೇವನು ಘೋರವಾದ ಬೇರೆಯ ಕರ್ಮದ ಆಚರಣೆಯಲ್ಲಿ ನಮ್ಮನ್ನು ಪ್ರೇರಿಸಿರುವನು ಎನ್ನಬಹುದೇ ಎಂದರೆ, ಹಾಗಲ್ಲ. ಲೋಕಪ್ರವರ್ತಕರೂಪವಾದ ಕರ್ಮವೇ ಯಜ್ಞ ವಾಗಿರುವುದು ಎಂದು ಉಕ್ತವಾಗಿರುವುದರಿಂದ ಈ ಕರ್ಮ ಮುಖ್ಯವಾದ ಯಜ್ಞವಲ್ಲವೆಂದು ತಿಳಿಯಬಹುದಾಗಿರುತ್ತದೆ ಮುಖ್ಯವಾದ ಯಜ್ಞ ಶಬ್ದದಿಂದ ಬೋಧಕವಾಗಿರುವ ಕರ್ಮದಲ್ಲಿ ಆಚರಣೆಯು ಇರಕೂಡ ದೆಂಬ ವಿಧಿಯನ್ನು ಹೇಳುವುದಲ್ಲದೆ ಔಪಚಾರಿಕವಾದ ಲೋಕಪ್ರವ

ಶೃಣುತ ತದ್ಯಥಾ ಸೃಷ್ಟಿಸ್ಥಿತಿಲಯತಿರೋಧಾ-
ನಾನುಗ್ರಹರೂಪಾಣೀತಿ । ಏತದ್ಭವತ್ಯೇವಂ

---

ಇತಿ ಶಂಕಾಪನೋದಾಯಾಹ । ಯಜ್ಞಃ ಕರ್ಮೈವೇತಿ ।
ಯದಿ ಮದಾಜ್ಞಾವಜ್ಞಾನೇನ ಯಜ್ಞನಿರತಾ ಭವೇತ ತತಃ
ಪಿತುರಾಜ್ಞಾತಿಲಂಘನಪ್ರಯುಕ್ತದೋಷದುಷ್ಟಃ ಸ ಯಜ್ಞಃ
ವೃಥಾ ಚೇಷ್ಟಾತ್ಮಕಕರ್ಮೈವ ಸ್ಯಾನ್ನ ಫಲಕೃತ್। ತದವಶ್ಯಂ
ಮದಾಜ್ಞಾನುಸಾರಿಭಿರ್ಭಾವ್ಯಮಿತಿ। ವಿವಕ್ಷಿತಸ್ಯ ಕರ್ಮಣಃ
ಪಂಚರೂಪತ್ವಪ್ರಕಟನಮುಖೇನ ಯಜ್ಞರೂಪತಾಮಾಹ ।
ಶೃಣುತೇ ವಿಶ್ವಕರ್ಮಣ ಇತಿ । ಪಂಚರೂಪಂ ವಿಶ್ವ-

---

ರ್ತಕರೂಪವಾದ ಯಜ್ಞಾನುಷ್ಠಾನವನ್ನು ಮಾಡುವುದರಲ್ಲಿ ಯಾವ ಕಾರಣವನ್ನು ಹೇಳಬೇಕು? ಮುಖ್ಯವಾದ ಯಜ್ಞಾನುಷ್ಠಾನದಿಂದ ಕರ್ಮಾಚರಣೆಯು ಆಗಿರುತ್ತದೆ ಎಂದು ಹೇಳುವುದಾದರೆ ಇದು ಪಿತೃ ವಾದ ಸಾಂಬನ ಆಜ್ಞೆಯನ್ನು ಉಲ್ಲಂಘನೆಯನ್ನು ಮಾಡಿ ಯಜ್ಞರೂಪ ವಾದ ಕರ್ಮಾಚರಣೆಯಲ್ಲಿ ನಿರತರಾದರೆ ಅದು ಆಜ್ಞೆಯನ್ನು ಉಲ್ಲಂಘಿಸಿ ಆಚರಿಸಿದಪ್ರಯುಕ್ತ ಕೇವಲ ಚೇಷ್ಟಾತ್ಮಕವಾಗಿರುವುದೇ ಹೊರತು ಫಲ ಕಾರಿಯಾಗುವುದಿಲ್ಲ. ಆದ್ದರಿಂದ ಪಿತೃವಾದ ನನ್ನ ಆಜ್ಞೆಯನ್ನು ಅನು ಸರಿಸುವವರಾಗಿರಬೇಕು ಎಂದು ಹೇಳುವುದಕ್ಕಾಗಿ ಐದು ವಿಧವಾದ ಈ ಕರ್ಮವೂ ಯಜ್ಞರೂಪವಾಗಿಯೇ ಇರುತ್ತದೆ ಎಂದು ಪ್ರಕಟವಾಗಿ ಬೋಧಿಸಿರುವುದು. ಶೃಣುತ ಎಂಬಿವೇ ಮೊದಲಾದ ವಾಕ್ಯದಿಂದ ಸೃಷ್ಟಿ

# ವಿಶ್ವಕರ್ಮಣಃ ಕುರ್ಯಾದೇವಮೇವ ಚ

**ಕರ್ಮಣೋ ಮೇ ಉಪದೇಶತೋ ಜ್ಞಾತಂ ಏವಂ ಯಜ್ಞ-ರೂಪಂ ಭವತ್ಯೇವೇತಿ ಭಾವಃ । ಅತ ಏವಮೇವ ಲೋಕಸ್ಯ ಕುರ್ಯಾದಿತಿ ನಿಗಮನಂ ಉಪಕ್ರಾಂತಸ್ಯ ಅಸಿದ್ಧಿರ್ವಿಗು-ಣಾದಿತಿ ಚೇನ್ನ ಯೋಗಾನುಗತೇಃ । ತತ್ರೈವಂ ಸ್ಯಾತ್ । ಯಾವದ್ಯಾವದ್ಧಿ ವಿಷಯಾಂತರರತಂ ವಿಷಯಾಂತರೇ ಪ್ರಸಭಂ ಪ್ರವರ್ತಯೇತ್ತಾವತ್ತಾನದ್ಬಲಾತ್ಕಾರಿತಾನವ - ಹಿತಮನಸ್ಕಚರಿತಂ ಕರ್ಮ ವಿಗುಣಸಾಧನಸಾಧಿತಂ ನ**

ಸ್ಥಿತಿ ಲಯ ತಿರೋಧಾನ ಅನುಗ್ರಹಗಳು ಎಂಬ ಪಂಚಕರ್ಮವೂ ಯಜ್ಞ ರೂಪವಾಗಿರುವುದು. ವಿಶ್ವಕರ್ಮನಾಗಿರುವ ನನ್ನ ಉಪದೇಶದಿಂದ (ಯಜ್ಞರೂಪವಾದ ಈ ಪಂಚಕೃತ್ಯಗಳ ಜ್ಞಾನವೂ ಉಂಟಾಗುವುದೆಂದು ತಿಳಿಯಬೇಕು.) ಶಿಲ್ಪಜ್ಞಾನವು ಹೀಗೆಯೇ ಯಜ್ಞರೂಪವಾಗಿಯೇ ಉಂಟಾಗುವುದು. ಲೋಕಪ್ರವರ್ತನೆಯನ್ನು ಹೀಗೆಯೇ ಆಚರಿಸ ತಕ್ಕದ್ದು. ಆದರೆ ಉಪಕ್ರಾಂತವಾದ ಕರ್ಮದ ಅಸಿದ್ಧಿಯು ವಿಗುಣತ್ವ ದಿಂದ ಆಗುವುದೆಂದು ಹೇಳುವುದು ಉಚಿತವಲ್ಲ. ಎಂದರೆ ಬೇರೆಯ ಯೋಚನೆಯುಳ್ಳದ್ದಾಗಿರುವ ಮನಸ್ಸನ್ನು ಬಲಾತ್ಕಾರದಿಂದ ಕೆಲಸ ಮಾಡುವಂತೆ ನಿರ್ಬಂಧದಿಂದ ಪ್ರೇರಿಸಿದಾಗ ಮನಸ್ಸಿಲ್ಲದೆ ಉದಾಸೀನತೆ ಯಿಂದ ಆಚರಿಸಲ್ಪಟ್ಟ ಕರ್ಮವು ವಿಗುಣವಾದ ಸಾಧನದಿಂದ ಸಾಧಿಸಲ್ಪ ಟ್ಟದ್ದಾಗಿ ಫಲವನ್ನು ಉಂಟುಮಾಡಲಾರದು.

**ಫಲಾಯಾವಕಲ್ಪೇತ । ಯಥಾಹುಃ । ಪರಸಂಗರತಾ ನಾರೀ ವ್ಯಗ್ರಾಪಿ ಗೃಹಕರ್ಮಣಿ । ತದೇವಾಸ್ವಾದಯತ್ಯಂತಃ ಪರ-ಸಂಗರಸಾಯನಮಿತಿ ತತಶ್ಚ ಗೃಹಕರ್ಮ ವಿಕಲಂ ಸತ್ ನ ಫಲಾಯೇತಿ ಶೇಷಃ । ಇಹ ಚೇನ್ಮೋ ಬಲಾತ್ಪ್ರವರ್ತ್ಯಂತ ಇತ್ಯನವಹಿತಮನಸ್ಕಾಚರಿತಂ ಶಿಲ್ಪಂ ನ ಸಿಧ್ಯೇತ್ ವಿಗುಣಾ-ದಿತಿ ಚೇನ್ನ ಯೋಗಾನುಗತೇಃ । ತರ್ಹ್ಯೇವಂ ಪೃಷ್ಟೋ ಭರ್ಗ ವ್ಯಾಚಷ್ಟಾಂ ಯಜ್ಞ ಇತಿ ಕಃ ಪದಾರ್ಥ ಇತಿ ।**

---

"ಪರಸಂಗರತಾನಾರೀ" ಎಂಬ ವಚನವು ಪರಸಂಗದಲ್ಲಿ ಆಸಕ್ತಿಯುಳ್ಳ ಸ್ತ್ರೀಯು, ತನ್ನ ಮನೆಯ ಕೆಲಸಗಳನ್ನು ಮಾಡುವಾಗಲೂ ಕೂಡ ಪರಸಂಗವನ್ನೇ ಮನಸ್ಸಿನಿಂದ ಸುಖಕರವೆಂದು ಭಾವಿಸುತ್ತಿರುವಳು. ಇದರಿಂದ ಗೃಹಕರ್ಮವು ಸಮಗ್ರವಾಗಿ ನಡೆಯದೆ ಫಲವನ್ನು ಉಂಟುಮಾಡುವುದಿಲ್ಲ ಎಂಬ ಅರ್ಥವನ್ನು ಬೋಧಿಸುವುದು. ಇದರಂತೆಯೇ ಬಲಾತ್ಕಾರದಿಂದ ಆಚರಿಸಲ್ಪಟ್ಟ, ಏಕಾಗ್ರ್ಯತೆಯಿಲ್ಲದಿರುವ ಮನಸ್ಸಿನಿಂದ ಮಾಡುವ ಶಿಲ್ಪವು ಸಿದ್ಧಿಯನ್ನು ಉಂಟುಮಾಡುವುದಿಲ್ಲ. ಬಲಾತ್ಕಾರದಿಂದ ಆಚರಿಸಿದ ಕರ್ಮವು ವಿಗುಣವಾಗುವುದರಿಂದಲೇ ಶಿಲ್ಪವು ಸಿದ್ಧವಾಗುವುದಿಲ್ಲ ಎಂದು ವೈಗುಣ್ಯವನ್ನು ಕಾರಣವನ್ನಾಗಿ ಹೇಳುವುದು ಉಚಿತವಲ್ಲ. ಯೋಗಾನುಗತಿಯು ಈ ವೈಗುಣ್ಯವನ್ನು ನಾಶಪಡಿಸಿ ಸಿದ್ಧಿಯನ್ನು ಉಂಟುಮಾಡುತ್ತದೆ. ಯೋಗಾನುಗತಿಯು ಅಸಿದ್ಧಿಪರಿಹಾರಕವಾಗುವುದಾದರೆ ಯಜ್ಞ ಪದಾರ್ಥವು ಯಾವುದೆಂಬುವುದನ್ನು ಚೆನ್ನಾಗಿ ವಿಮರ್ಶೆಮಾಡಿ ತಿಳಿಸು

ದೇವಪೂಜೇತಿ ಚೇತ್, ತತೋಽಪಿ ಪೃಷ್ಟೋ ವ್ಯಾಚಷ್ಟಾಂ ಪೂಜೇತಿ ಕಃ ಪದಾರ್ಥ ಇತಿ। ಪ್ರೀತಿಕರಂ ಕರ್ಮೇತಿ ಚೇತ್। ಅವಧೇಹೀದಂ। ತತಶ್ಚ ಪಿತ್ರನುಶಿಷ್ಟಮರ್ಥ-ಮನುಷ್ಠೇಯಮವಗಚ್ಛ ಪಿತಾ ಪ್ರೀಣಾತೀತಿ ವಿಶ್ವಕರ್ಮಣಃ ಏತತ್ಕರ್ಮ ತತ್ಪ್ರೀತಿಕರಮಿತ್ಯರ್ಥಃ। ಏವಂ ಯಜ್ಞರೂಪಂ ಭವತೀತಿ ಯೋಗಾರ್ಥಮನುಗಚ್ಛಾಮಃ ತ್ವದ್ವಚನಮನು-ಸೃತ್ಯ ಜಾನೀಮ ಇತ್ಯರ್ಥಃ। ನಾತೋ ವಿಗುಣಂ ಕರ್ಮ ಸ್ಯಾತ್ ಯೇನ ಫಲಂ ನ ಸಿಧ್ಯೇದಿತ್ಯರ್ಥಃ। ಅಥಾಪಿ ಸ್ಯಾನ್ನಿತ್ಯ-

---

ಬೇಕು. ಯಜ್ಞವೆಂಬುವುದು ದೇವಪೂಜೆಯೆಂಬುವುದಾಗಿಯೂ ದೇವಪ್ರೀತಿಸಂಪಾದಕವಾದ ಕರ್ಮವೆಂಬುವುದಾಗಿಯೂ ತಿಳಿಯುವುದಾದರೆ ಅವನ್ನು ಆಚರಿಸಿದಕಾರಣ ಪಿತೃವಾದ ವಿಶ್ವಕರ್ಮನು ಉಪದೇಶಮಾಡಿದ ಕರ್ಮವು ಅನುಷ್ಠೇಯವಾಗಿರುವುದೆಂದು ತಿಳಿಯಬೇಕು. ಪಿತೃವಿನ ಪ್ರೀತಿಸಂಪಾದಕವಾದ ಕರ್ಮವು ಈ ಶಿಲ್ಪವೇ ಆಗಿರುವುದು. ಇದು ಪಂಚಕರ್ಮರೂಪವಾದ ಯಜ್ಞವೆಂದು ಯೋಗಾರ್ಥವನ್ನು ತಿಳಿಯಬೇಕು. ವಿಶ್ವಕರ್ಮನ ಉಪದಿಷ್ಟವಾದ ವಚನವನ್ನು ಅನುಸರಿಸಿ ಈ ಪ್ರಕಾರವಾಗಿ ತಿಳಿಯಬೇಕು. ಚಿತ್ತೈಕಾಗ್ರತೆಯಿಂದ ಮಾಡಿದ ಕರ್ಮವು ವಿಗುಣವಲ್ಲ. ಕರ್ಮಫಲವೂ ಕೂಡ ಇದರಿಂದ ಸಮಗ್ರವಾಗಿ ಸಿದ್ಧವಾಗುವುದು.

ಸಾಂಬನು ನಿತ್ಯತೃಪ್ತನಾಗಿರುವನು. ನಿತ್ಯತೃಪ್ತನಾಗಿರುವುದರಿಂದ ಯಜ್ಞಕರಣನಿಬಂಧನ ರೂಪವಾದ ತೃಪ್ತಿಯೂ ವೈಗುಣ್ಯದಿಂದ ಅಸಿದ

ಲೋಕಸ್ಯ । ದಾತಾರೋ ಭವನ್ತು ಜ್ಞಾನಸ್ಯ

ತೃಪ್ತಃ ಸಾಂಬಃ । ನಾತ ಏತನ್ನಿಬಂಧನಾ ತೃಪ್ತಿರವಕಾಶೇ-
ತೇತಿ । ಅಸಿದ್ಧಿರ್ವಿಗುಣಾದಿತಿ ಪ್ರಾಪ್ನೋತೀತಿ । ತತ್ರಾಹ ನ
ಯೋಗಾನುಗತೇರಿತಿ । ನಾಯಂ ದೋಷಃ ಪ್ರಾಪ್ನೋತಿ,
ಕಿಂ ಕಾರಣಂ? ಯೋಗಾನುಗತಿರೇವ । ದಾನಮಪಿ ಯಜ್ಞ-
ಶಬ್ದಸ್ಯಾವಯವಾರ್ಥಃ । ಯಃ ಶಿಲ್ಪಂ ಪ್ರಚಾರಯತಿ ಸ
ಜ್ಞಾನಂ ಸಾಮಾನ್ಯತಃ, ವಿಜ್ಞಾನಂ ವಿಶೇಷತಃ ಲೋಕೇ-
ಭ್ಯೋ ದದಾತೀತಿ । ಅನು ಅನಂತರವಚನೇನ ಗತೇಃ
ಅವಗತೇಃ ಇತಿ ಸೂತ್ರಾರ್ಥಃ । ತಥಾ ಹ್ಯನಂತರಂ
ವಚನಂ—ದಾತಾರೋ ಭವಂತು ಜ್ಞಾನಸ್ಯ ವಿಜ್ಞಾನಸ್ಯ ಚ

ಯೆಂಬುವುದೂ ಕೂಡ ಉಂಟಾಗುವುದಕ್ಕೆ ಅವಕಾಶವಿರುವುದಿಲ್ಲ.
ಯೋಗಾನುಗತಿ ರೂಪವಾದ ಕಾರಣದಿಂದ ಈ ವಿಧವಾದ ದೋಷವು
ಉಂಟಾಗಲು ಅವಕಾಶವಿಲ್ಲ ಯಜ್ಞವೆಂಬ ಶಬ್ದಕ್ಕೆ ದಾನವೆಂಬುವುದು
ಅವಯವಾರ್ಥವಾಗಿರುತ್ತದೆ. ಶಿಲ್ಪ ಪ್ರಚಾರ ಮಾಡುವುದೆಂದರೆ
ಸಾಮಾನ್ಯವಾದ ಜ್ಞಾನವನ್ನು ದಾನ ಮಾಡುವುದೆಂಬರ್ಥವು. ವಿಜ್ಞಾನ
ವೆಂಬುವುದರಿಂದ ಶಿಲ್ಪವನ್ನು ವಿಶೇಷವಾಗಿ ಜನರಿಗೆ ಪ್ರಚಾರಮಾಡಿ
ಆ ಮೂಲಕ ಜನರಿಗೆ ಜ್ಞಾನವನ್ನು ವಿಶೇಷವಾಗಿ ದಾನಮಾಡಿದಂತಾಗು
ವುದು. ಯೋಗ–ಅನು–ಗತಿಃ ಎಂಬ ಮೂರು ಶಬ್ದಗಳಲ್ಲಿ ಅನು
ಎಂಬುವುದು ಅನಂತರ ವಾಚಿಯಾಗಿರುವುದು. ಲೋಕದ ಜನರಿಗೆ

**ವಿಜ್ಞಾನಸ್ಯ ಶಿಲ್ಪಿನಃ। ಅಧಿಷ್ಠಾತಾಹಂ ಕರ್ಮಣಃ ಸಕಲಸ್ಯ ಯಜ್ಞರೂಪಃ। ವಿಲಸಿತವ್ಯೋವಂ**

**ಶಿಲ್ಪಿನ ಇತಿ। ನನು ಯದೀನ್ಮೋ ಪಂಚಶಿಲ್ಪಂ ಪ್ರಕಟಯೇಯುಸ್ತರ್ಹಿ ಸಾಂಬಃ ಪ್ರಕಟಯತೀತಿ ಸಂಗ್ರಹಸೂಕ್ತಿರಸಬದ್ಧಾಪ್ರಾಪ್ನೋತಿ। ತದತ್ರ ಏಕವಚನನಿರ್ದೇಶರೂಪವಿರುದ್ಧಗುಣಾತ್ಪಂಚಕರ್ತೃಕತಾಯಾ ಅಸಿದ್ಧಿರಿತಿ ಚೇನ್ನ। ಕಿಂ ಕಾರಣಂ? ಯೋಗಾನುಗತಿರೇವ। ಅಧಿಷ್ಠಾತಾಹಂ ಸಕಲಸ್ಯ ಕರ್ಮಣಃ ಯಜ್ಞರೂಪ ಏವೇತಿ। ಯಜ್ಞರೂಪೆ**

ಶಿಲ್ಪದ ಜ್ಞಾನ ವಿಜ್ಞಾನಗಳನ್ನು ದಾನಮಾಡುವುದು ಎಂಬ ಅರ್ಥವು "ದಾತಾರೋ ಭವಂತು ಜ್ಞಾನಸ್ಯ ವಿಜ್ಞಾನಸ್ಯ ಚ ಶಿಲ್ಪಿನಃ" ಎಂಬ ಮುಂದಿನ ಸೂತ್ರದಿಂದ ತಿಳಿದು ಬರುತ್ತದೆ.

ಮನು, ಮಯ, ತ್ವಷ್ಟಾ, ಶಿಲ್ಪೀ, ವಿಶ್ವಕೃತ್ ಎಂಬ ಐದು ಜನಗಳು ಶಿಲ್ಪಜ್ಞಾನವನ್ನು ಪ್ರಕಟಮಾಡುವುದಾದರೆ "ಸಾಂಬಃ ಪ್ರಕಟಯತಿ" ಎಂಬುದಾಗಿ ಹೇಳುವ ಸೂಕ್ತಿಯು ಅಸಂಬದ್ಧವಾಗುತ್ತದೆ. ಸಾಂಬ: ಎಂಬ ಪದವು ಏಕವಚನಾಂತವಾಗಿರುವುದು. ಈ ಏಕವಚನ ನಿರ್ದೇಶವು ಬಹುವಚನ ವಿರುದ್ಧವಾದ ಕಾರಣ ಜ್ಞಾನವಿಜ್ಞಾನೋಪದೇಶಕರ್ತೃಗತವಾದ ಪಂಚಸಂಖ್ಯಾವೈಶಿಷ್ಟ್ಯ ಸಿದ್ಧವಾಗುವುದಿಲ್ಲ ಎಂದು ಆಕ್ಷೇಪವು ಬರುತ್ತದೆ. "ಅಧಿಷ್ಠಾತಾಹಂ ಸಕಲಸ್ಯ ಕರ್ಮಣಃ

**ಏವೇತಿ ಇಜ್ಯಮಾನರೂಪ ಏವೇತ್ಯರ್ಥಃ । ಯಜ ಧಾತೋ-ರುಪರಿತನನಙ್ ಪ್ರತ್ಯಯಸ್ಯ ಕರ್ಮಾರ್ಥಕತ್ವಾತ್। ನಿತ್ಯ-ತೃಪ್ತಸ್ಯಾಪಿ ಸಾಂಬಸ್ಯ ಭಕ್ತಸಾರವಶ್ಯೇನ ತೃಪ್ತಿಪ್ರಕಟನ-ಸಂಭವಾತ್ । ಮೃಷ್ಟಾನ್ನಭೋಜನತೃಪ್ತಸ್ಯಾಪಿ ಪಿತ್ರಾದೇ-ರ್ಬಾಲೇ ವಾತ್ಸಲ್ಯೇನ ತದ್ದತ್ತಾಲ್ಪಫಲಭಕ್ಷಣೇನ ತೃಪ್ತಿಪ್ರಕ-ಟನವತ್ । ಇತಿ ಶ್ರುತಿಹೃದಯಂ । ಅಧಿಷ್ಠಾತೃತ್ವರೂಪೇಣ ಸರ್ವೇಷ್ವಪಿ ಪಂಚಸು ಸಾಂಬಾನುಗತ್ಯಪಗಮಾದಿತಿ ಸಾ-**

---

ಯಜ್ಞರೂಪಃ" ಎಂಬ ಸೂತ್ರದಲ್ಲಿ ಉಕ್ತವಾಗಿರುವ ಪ್ರಕಾರ ಯೋಗಾನುಗತಿಯನ್ನು ಹೇಳಿರುವುದರಿಂದ ಹಿಂದೆ ಹೇಳಿರುವ ಅಸಿದ್ಧಿಯು ಉಂಟಾಗಲು ಅವಕಾಶವಿರುವುದಿಲ್ಲ. ಯಜ್ಞ ಶಬ್ದಕ್ಕೆ ಪೂಜೆಯನ್ನು ಹೊಂದುವವನು ಎಂದು ಅರ್ಥವು. ಯಜಧಾತುವಿನ ಮೇಲೆ ಬಂದಿರುವ ನಙ್ ಪ್ರತ್ಯಯವು ಕರ್ಮಾರ್ಥಕವಾಗಿರುವುದು. ಇದರಿಂದ ಸಾಂಬನು ಇಜ್ಯಮಾನರೂಪನಾಗಿರುವನು.

ನಿತ್ಯತೃಪ್ತನಾದರೂ ಸಾಂಬನು ಭಕ್ತರ ಇಚ್ಛಾನುಸಾರವಾಗಿ ಭಕ್ತರಿಗೆ ಅಧೀನನಾಗಿರುವುದರಿಂದ ತೃಪ್ತಿಯನ್ನು ಪ್ರಕಟಮಾಡಬೇಕಾಗಿರುವುದು. ಮೃಷ್ಟಾನ್ನಭೋಜನದಿಂದ ತಂದೆಯು ತೃಪ್ತನಾಗಿದ್ದರೂ ಸಣ್ಣ ಮಗುವಾದ ತನ್ನ ಪುತ್ರನಿಂದ ಕೊಡಲ್ಪಟ್ಟ ಹಣ್ಣಿನ ಚೂರಿನಿಂದ ತೃಪ್ತಿಯನ್ನು ಪ್ರಕಟಿಸುವುದು ಲೋಕ ರೂಢಿಯಾಗಿರುತ್ತದೆ. ಈ ಅಭಿಪ್ರಾಯವನ್ನೇ ಶ್ರುತಿಯು ಬೋಧಿಸುತ್ತಿರುವುದು. ಅಧಿಷ್ಠಾತೃತ್ವರೂಪದಿಂದ ಐದು ಮೂರ್ತಿಗಳಲ್ಲಿಯೂ

**ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲಂ । ಗುಹ್ಯ-
ಮಿದಮಾಧ್ಯಾತ್ಮಂ ರಹಸ್ಯಂ ಭವತಿ ಪ್ರಾಣಿ-**

ಸಂಬದ್ಧಾ ಸಂಗ್ರಹಸೂಕ್ತಿಃ । ಏವಮಧಿಷ್ಠಾತೃತ್ವೇನ ಕಿಂ ಸಿದ್ಧಂ? ತದುಚ್ಯತೇ—ವಿಲಸಿತಮೇವಂ ಪ್ರಕಾಶಿತಂ ಪ್ರಕ-ಟಿತಮೇವಂ ಉಕ್ತರಿತ್ಯಾ ಮಯ್ಯೈವ ಜಗಚ್ಛಿಲ್ಪಸ್ಯ ಕೌಶಲ-ಮಿತಿ । ಸ್ಪಷ್ಟೋಽರ್ಥಃ । ಗುಹ್ಯಮಿದಮಧ್ಯಾತ್ಮಂ ಧರ್ತವ್ಯ-ಮಿತಿ ಶೇಷಃ । ಅಧ್ಯಾತ್ಮಂ = ಮನಸಿ । ಗುಹ್ಯಮಿತಿ ಕೋಽರ್ಥಃ? ತಮಾಹ । ರಹಸ್ಯಂ ಭವತಿ ಪ್ರಾಣಿನಾಂ ಅಜ್ಞೇಯಮಿತಿ । ಸುಸೂಕ್ಷ್ಮಮಿತ್ಯರ್ಥಃ । ಅಥ ಪಂಚ-

ಸಾಂಬನ ಅನುಗತಿಯು ಇರುವುದರಿಂದ ಸಂಗ್ರಹಸೂಕ್ತಿಯು ಅಸಂಬದ್ಧಾರ್ಥವನ್ನು ಬೋಧಿಸುವುದಿಲ್ಲ.

ಸಾಂಬನು ಅಧಿಷ್ಠಾತೃವಾಗಿರುವುದರಿಂದಲೇ ಹಿಂದೆ ಹೇಳಿದ ರೀತಿಯಿಂದ ಈ ಪ್ರಕಾರವಾಗಿ ನನ್ನಿಂದಲೇ(ಸಾಂಬನಿಂದಲೇ)ಜಗತ್ತೆಂಬ ಶಿಲ್ಪಜ್ಞಾನದ ಕುಶಲತೆಯು ಪ್ರಕಟವಾಗಿರುವುದು.

ಈ ಶಿಲ್ಪವಿಜ್ಞಾನಕೌಶಲವು ಆತ್ಮವಿಷಯಕವಾಗಿರುವುದರಿಂದ ಬುದ್ಧಿಯಿಂದ ಧರಿಸಬೇಕು. ಗುಹೂ ಸಂವರಣೆ ಎಂಬ ಧಾತುವಿನಿಂದ ಗುಹ್ಯವೆಂಬ ರೂಪವು ಉಂಟಾಗಿರುವುದು ಶಿಲ್ಪವಿಜ್ಞಾನಕೌಶಲವು ಬಹಳ ಸೂಕ್ಷ್ಮವಾಗಿರುವ ಕಾರಣ ಇದು ಗುಹ್ಯವಾಗಿರುವುದು ರಹಸ್ಯವಾಗಿರುವುದರಿಂದ ಪ್ರಾಣಿಗಳಿಗೆ ಇದು ತಿಳಿಯಲಶಕ್ಯವಾಗಿರುತ್ತದೆ.

**ನಾಮುಜ್ಞೇಯಂ । ತದೇತದ್ವಿವೃಣುತ ವಿವೃ-
ಣುತ ಲೋಕಸ್ಯ। ಪ್ರಕಲ್ಪಯತ ಯಜ್ಞಾಂ
ಶಿಲ್ಪೇನ । ಶಿಲ್ಪೇನೈವೇದಮುಪಬೃಂಹಿತಂ ।**

---

ಪುರುಷಾನ್ ಪ್ರೇರಯತಿ ಭಗವಾನ್—ತದೇತದ್ವಿವೃಣುತ ವಿವೃಣುತ ಲೋಕಸ್ಯೇತಿ। ಆಧರಾರ್ಥಾ ಸರ್ವತ್ರ ದ್ವಿರುಕ್ತಿರಸುಸಂಧೇಯಾ। ಪ್ರಕಲ್ಪಯತ ಯಜ್ಞಂ ಶಿಲ್ಪೇನ। ಸ್ಪಷ್ಟೋಽರ್ಥಃ। ಸಾಂಬಾಖ್ಯಸ್ಯ ಬ್ರಹ್ಮಣ ಇತಿ ಶೇಷಃ। ತತ್ರ ಹೇತುಮಾಹ। ಶಿಲ್ಪೇನೈವೇದಮುಪಬೃಂಹಿತಮಿತಿ । ಪುರಾತನೈರಿದಂ ಸಂಬಾಖ್ಯಂ ಬ್ರಹ್ಮ ಶಿಲ್ಪೇನೈವ ವರ್ಧಿತಂ ಸಂತೋಷಿತಂ ।

---

ಪೂಜ್ಯನಾದ ಸಾಂಬನು ಈ ಪ್ರಕಾರವಾಗಿರುವ ಶಿಲ್ಪಜ್ಞಾನವನ್ನು ಲೋಕದಲ್ಲಿರುವ ಪ್ರಾಣಿಗಳಿಗೆ ವಿವರವಾಗಿ ತಿಳಿಸಿರಿ ಎಂದು ಮನುವೇ ಮೊದಲಾದ ಐದು ಜನರನ್ನು ಪ್ರೇರಿಸುವನು. ಎಲ್ಲಾ ಕಡೆಯಲ್ಲಿಯೂ ದ್ವಿರುಕ್ತಿಯು ಆದರವನ್ನು ತೋರಿಸುವುದು. ಶಿಲ್ಪಜ್ಞಾನದಿಂದ ಸಾಂಬನೆಂದು ಪ್ರಸಿದ್ಧನಾದ ದೇವನ ತೃಪ್ತಿಕರವಾದ ಪೂಜಾದಿಗಳು ನಡೆಯುವಂತೆ ನಿರ್ಮಿಸಿರಿ.

ಪೂರ್ವೀಕರಾದವರು ಹೀಗೆ ಹೇಳುವರು—ಸಾಂಬನೆಂದು ಹೆಸರುಳ್ಳ ಬ್ರಹ್ಮಮೂರ್ತಿಯು ಶಿಲ್ಪದಿಂದಲೇ ಸಂತೋಷಪಡಿಸಲ್ಪಟ್ಟಿರುವುದು. ಶಿಲ್ಪ

## ಯಜ್ಞೋ ಭವತಿ ಲೋಕಾನಾಂ ನಿಶ್ರೇ-

ಅತಶ್ಚ ಶಿಷ್ಟಾಚಾರಃ ಶಿಲ್ಪಯಜ್ಞಾನುಷ್ಠಾನೇ ಹೇತುಃ ಸ್ಫುಟಿತಃ। ಯಃ ಪುನಃ ಫಲಗೃಧ್ನುಸ್ತಮುಪಿ ಲೋಕಂ ಫಲಂ ಪ್ರದರ್ಶಯನ್ ಪ್ರವರ್ತಯತಿ ವೇದಃ । ಯಜ್ಞೋ ಭವತೀತಿ । ನಿಃಶ್ರೇಯಸೇ ನಿಮಿತ್ತೇ ಯಜ್ಞಂ ಕುರುತ ಯತಸ್ತತ್ರ ಯಜ್ಞೋ ಭವತೀತಿ ವಾಕ್ಯಾರ್ಥಃ । ನ ಕೇವಲಮಿದಮೇವ ಫಲಂ ಅಪಿ ತು ಸರ್ವಾಣಿ ಜನ್ಯಾನಿ ಫಲಾನಿ ಸಿಧ್ಯೇರನ್ । ಅತಃ ಸರ್ವೈರತ್ರ ಪ್ರವರ್ತಯಿತವ್ಯಮಿತ್ಯರ್ಥಃ ।

ಯಜ್ಞದ ಅನುಷ್ಠಾನವಲ್ಲಿ ಶಿಷ್ಟಾಚಾರವೂ ಕಾರಣವೆಂದು ಸ್ಪಷ್ಟವಾಗಿ ತಿಳಿಯುವುದು. ಫಲಾಪೇಕ್ಷೆಯುಳ್ಳವನ ಇಚ್ಛಾವಿಶೇಷವಾದ ಫಲವನ್ನು ನಿರ್ದೇಶವಮಾಡಿ ವೇದವು ಅದರ ಪ್ರವೃತ್ತಿಯು ಉಂಟಾಗುವಂತೆ ಬೋಧಿಸುವುದು. ನಿಶ್ರೇಯಸವೆಂದರೆ ಮೋಕ್ಷವು, ಮೋಕ್ಷವೆಂಬುವುದು ಎಲ್ಲಾ ವಿಧವಾದ ಶ್ರೇಯಸ್ಸಿಗಿಂತಲೂ ಅತಿಶಯವಾದ ಶ್ರೇಯಸ್ಸಾಗಿರುವುದು. ಇದನ್ನು ಹೊಂದುವ ನಿಮಿತ್ತವಾಗಿ ಯಜ್ಞವನ್ನು ಆಚರಿಸಿರಿ. ಇದರಿಂದಲೂ ದೇವತಾತೃಪ್ತಿಯು ಉಂಟಾಗುವುದು ಎಂದು ಈ ವಾಕ್ಯದ ಅರ್ಥವಾಗಿರುತ್ತದೆ. ಶಿಲ್ಪವೆಂಬ ಯಜ್ಞಾಚರಣೆಯಿಂದ ಮೋಕ್ಷವೆಂಬ ಫಲವು ಮಾತ್ರವೇ ಸಿದ್ಧವಾಗುವುದಿಲ್ಲ. ಇತರವಾದ ಅನಿತ್ಯವಾದ ಫಲಗಳೆಲ್ಲವೂ ಸಿದ್ಧವಾಗುತ್ತವೆ. ಈ ಕಾರಣದಿಂದಲೇ ಎಲ್ಲರೂ ಈ ಶಿಲ್ಪ ಯಜ್ಞಾಚರಣೆಯಲ್ಲಿ ಪ್ರವೃತ್ತರಾಗತಕ್ಕದ್ದು ಎಂಬ ಅರ್ಥವು ಉಕ್ತವಾ

# ಯಸೇ। ಸಿದ್ಧ್ಯೇರನ್ಯಾನಿ ವಿಧಾನ್ಯಪಿ ಕಾರ್ಯಾಣಿ।

**ಅಯಮಾಶಯಃ । ಸಂತಿ ಸಪ್ತಕೋಟಿಮಹಾಮನ್ತ್ರಾಃ । ಸಂತಿ ಚ ತತ್ಪ್ರತಿಪಾದ್ಯಾ ದೇವತಾಸ್ತಾವತ್ಯಃ । ಸಂತಿ ಚ ತಾವಂತಿ ತದಾರಾಧನಾನಿ । ಅಪೇಕ್ಷಿತಾಶ್ಚ ತದನುಗುಣಾಲಯನಿರ್ಮಾಣಾದಯೋಽರ್ಥಾಃ ಯೈರಖಿಲಫಲಾನಿ ಸಿಧ್ಯೇಯುಃ । ತೇ ಚಾರ್ಥಾಃ ಶಿಲ್ಪಸಾಧ್ಯಾ ಇತಿ ಶಿಲ್ಪಮಾಚರೇಯುರ್ಯತ್ರ ತೃಪ್ಯತಿ ತಾಂ ತಾಂ ದೇವತಾಮುಪಾಸೀತೇತಿ ಸರ್ವಫಲಕತಾ ಶಿಲ್ಪಸ್ಯೇತಿ । ಯೇ ಪುನರ್ಮಂವಾಃ**

---

ಗಿರುತ್ತವೆ. ಏಳು ಕೋಟಿ ಮಹಾಮಂತ್ರಗಳು ಇರುವುವು. ಆಯಾಯ ಮಂತ್ರಗಳಿಂದ ಪ್ರತಿಪಾದ್ಯರಾದ ದೇವತೆಗಳೂ ಅಷ್ಟು ಸಂಖ್ಯೆಯುಳ್ಳವರಾಗಿಯೇ ಇರುವರು ಆಯಾಯ ಮಂತ್ರಪ್ರತಿಪಾದ್ಯ ದೇವತಾನುಗುಣವಾದ ಆರಾಧನಾಕ್ರಮಗಳೂ ಪ್ರತ್ಯೇಕವಾಗಿ ಉಕ್ತವಾಗಿರುತ್ತವೆ. ಆಯಾಯ ದೇವತಾರಾಧನಾನುಗುಣವಾಗಿರುವ ದೇವಾಲಯ ನಿರ್ಮಾಣವೇ ಮೊದಲಾದವುಗಳು ಎಲ್ಲಾ ವಿಧವಾದ ಫಲಸಿದ್ಧಿಗಾಗಿಯೇ ಅಪೇಕ್ಷಿತವಾಗಿರುತ್ತವೆ ಹೀಗೆ ಸಿದ್ಧಿಯನ್ನು ಉಂಟುಮಾಡುವ ವಸ್ತುನಿರ್ಮಾಣಾದಿಗಳು ಶಿಲ್ಪಸಾಧ್ಯವಾಗಿರುತ್ತವೆ. ಆದ್ದರಿಂದ ದೇವತಾತೃಪ್ತಿಕರವಾದ ಶಿಲ್ಪವನ್ನು ಆಚರಿಸುವುದರಿಂದ ಆಯಾಯ ದೇವತಾ ಉಪಾಸನಾಚರಣೆಯೂ ಆಗುವುದು. ಈ ಕಾರಣದಿಂದಲೇ ಶಿಲ್ಪವು ಸರ್ವ ವಿಧವಾದ ಫಲವನ್ನು ಉಂಟುಮಾಡುವುದು ಎಂದು ನಿರ್ದೇಶವಾಡಿರುತ್ತದೆ.

## ಭವತಿ ಚ ತನ್ನಾನಾವಿಧಶಿಲ್ಪಬಹುಳಂ ।

**ನ ಸಮಾಧಾತುಂ ಮನಃ ಪ್ರಭವಂತಿ ತಾನಪಿ ಯುಕ್ತ್ಯಾ ಪ್ರವರ್ತಯತಿ । ಭವತಿ....ಲಮಿತಿ । ನಾನಾವಿಧಶಿಲ್ಪರೂಪಂ ಬಹುಫಲದಮಿತಿ ತದರ್ಥಃ । ನ ಚ ಕೌಶಲಾಭಾವಾನ್ಮಂದಾ ಪ್ರವೃತ್ತಿರುಕ್ತಾ । ತತಶ್ಚ ಕೌಶಲಮೇವ ಸಾಧನೀಯಮಿತಿ ಚೇತ್ ಸೋಽಪಿ ಭಾವ್ಯೋಽಸ್ಯಾಃ ಶ್ರುತೇರಿತಿ ವದಾಮಃ । ಕೋಽಸೌ ಭಾವಃ? ಅಯಂ ಭಾವಃ । ಭಗವತಃ ಸಾಂಬಸ್ಯಾ-**

ಬುದ್ಧಿಗತವಾದ ಮಂದತನವು ಅಂದರೆ ಬುದ್ಧಿಚಾತುರ್ಯವಿಲ್ಲದವರು ಮನಸ್ಸನ್ನು ಏಕಾಗ್ರತೆಯಿಂದ ಇರಿಸಲು ಅಶಕ್ತರಾಗಿರುವರು. ಅವರೂಕೂಡ ಶಿಲ್ಪದಲ್ಲಿ ಪ್ರವೃತ್ತಿಯುಳ್ಳವರಾಗಿರುವಂತೆ ಯುಕ್ತಿಯಿಂದ ಬೋಧಿಸುವುದಕ್ಕಾಗಿಯೇ "ಭವತಿ ಚ ತನ್ನಾನಾವಿಧಶಿಲ್ಪಬಹುಳಂ" ಎಂದು ಸೂತ್ರವು ಪ್ರವೃತ್ತವಾಗಿರುವುದು. ಅನೇಕವಿಧವಾದ ಶಿಲ್ಪಜ್ಞಾನರೂಪವಾದ ಕೌಶಲವು ಬಹಳ ಫಲವನ್ನು ಕೊಡುವುದಾಗಿರುತ್ತದೆ ಎಂದು ಈ ಸೂತ್ರದ ಅರ್ಥವು. ಶಿಲ್ಪಕೌಶಲವು ಇಲ್ಲದಿದ್ದರೆ ಶಿಲ್ಪಕಾರ್ಯದಲ್ಲಿ ಪ್ರವೃತ್ತಿಯು ಮಂದವಾಗಿರುತ್ತದೆ. ಈ ಕಾರಣದಿಂದ ಶಿಲ್ಪದ ವಿಷಯದಲ್ಲಿ ಕೌಶಲ್ಯವನ್ನು ಸಾಧಿಸಬೇಕು. ಆ ಕುಶಲತೆಯು ಬಹಳವಿಧವಾದ ಫಲವನ್ನು ಕೊಡುವುದು ಎಂದು ಈ ಶ್ರುತಿಯ ಅರ್ಥವಾಗಿರುತ್ತದೆ. ಬುದ್ಧಿಮಾಂದ್ಯವಿರುವವರಿಗೆ ಪೂಜ್ಯನಾದ ಸಾಂಬಮೂರ್ತಿಯನ್ನು ತಿಳಿಯಬೇಕೆಂದು ಪ್ರವೃತ್ತಿಯುಂಟಾದಾಗ

## ಶಿಲ್ಪಾದ್ಧೃತೇ ಕಿಂಚಿತ್ಸತ್ರಮಿತಿ ನೋಚ್ಯತೇ

ಜ್ಞೇಯಮಿತಿ ಪ್ರವೃತ್ತ್ಯಾಭಕ್ತ್ಯಾ, ತೇಷಾಮಪಿ ಮಹತ್ಕೌಶಲಂ ಭವೇದಿತಿ । ಬಹುಫಲಂ ದಾತಿ ದದಾತೀತಿ ಬಹುಫಲದತ್ವ-ಯೋಗಾತ್ ಕೌಶಲಂ ತದರ್ಥಃ । ನನು ಸರ್ವಫಲಪ್ರದಂ ಶಿಲ್ಪಂ ನ ಭವತಿ। ಬಹುದಿನಸಾಧ್ಯಸತ್ರಯಾಗಜನ್ಯಫಲಾನಾಂ ಶಿಲ್ಪನ್ನಿಷ್ಪತ್ತ್ಯಸಂಭವಾತ್ ಇತಿ ಶಂಕಾಂ ತತ್ಸಾದ್ಧೃತಫಲ-ಕತ್ವಬೋಧೇನ ಪರಿಹರತಿ । ಶಿಲ್ಪಾದ್ಧೃತ ಇತಿ । ಸತ್ರಮಪಿ

ಆವರಿಗೆ ಸಾಂಬನ ವಿಷಯದಲ್ಲಿ ಭಕ್ತಿಯು ಉಂಟಾಗುವುದು. ಆಗ ಅವರಿಗೂ ಕೂಡ ಕುಶಲತೆಯು ಹೆಚ್ಚಾಗಿ ಉಂಟಾಗುವುದು. ಈ ಕೌಶಲವು ಬಹಳ ಫಲವನ್ನು ಉಂಟುಮಾಡುವುದೆಂದು ಹೇಳಿರುವುದರಿಂದ ಕುಶಲತೆಯು ಶಿಲ್ಪಜ್ಞಾನದ ವಿಷಯದಲ್ಲಿ ಅವಶ್ಯಕವಾಗಿರುವುದು.

ಬಹಳ ದಿನಗಳವರಿಗೂ ಆಚರಿಸುವ ಸತ್ರಯಾಗದ ಫಲವೂ ಕೂಡ ಈ ಶಿಲ್ಪಜ್ಞಾನದಲ್ಲಿರುವ ಕುಶಲತೆಯಿಂದ ಉಂಟಾಗ. ವುದರಿಂದ ಶಿಲ್ಪಜ್ಞಾನವು ಎಲ್ಲಾ ವಿಧವಾದ ಫಲವನ್ನೂ ಕೊಡುತ್ತದೆ. ಇದೇ ಅಭಿಪ್ರಾಯವನ್ನು "ಶಿಲ್ಪಾದ್ಧೃತೇ ಕಿಂಚಿತ್ ಸತ್ರಂ ನೋಚ್ಯತೆ, ನೋಚ್ಯತೆ " ಎಂದು ಸೂತ್ರವು ಪ್ರವೃತ್ತವಾಗಿರುತ್ತದೆ. ಸೂತ್ರಗತವಾದ ದ್ವಿರುಕ್ತಿಯು ಆದರವನ್ನು ತೋರಿಸುವುದಕ್ಕಾಗಿ ಹೇಳಿರುತ್ತದೆ. ಸತ್ರಯಾಗವೆಂಬುವುದು ಬಹುದಿನಸಾಧ್ಯವಾಗಿ ಇರುವುದು. ಇದು ಶ್ರುತಿಯಲ್ಲಿ ನಿರ್ದಿಷ್ಟವಾದ ಫಲವನ್ನು ಮಾತ್ರ ಉಂಟುಮಾಡುವುದು. ಶಿಲ್ಪ

**ಶಿಲ್ಪಾನ್ಯೂನಮಿತಿ ಕೈಮುತಿಕನ್ಯಾಯಾದಃ ಪ್ರಕೃತಾರ್ಥ-ಸ್ಥಾಪನಾಯ । ನನು ಸರ್ವಂ ಫಲಂ ಜನಯತಿ ಶಿಲ್ಪಮಿತಿ ಸರ್ವಶಬ್ದೋಽನೇಕಾರ್ಥಃ । ಸರ್ವೋತ್ಕೃಷ್ಟಫಲಸಾಧನಾ-ನ್ಯನ್ಯಾನ್ಯೇವ ಕರ್ಮಾಣಿ, ನ ಚ ಸತ್ರಾಧಿಕತಾವಾದೇನಾಪಿ ಪ್ರಶಸ್ತಫಲಕತಾ ಗಾಮಿತಾ ಭವತೀತಿ ಯೇ ಮನ್ಯಮಾನಾ**

---

ಜ್ಞಾನವು ಕುಶಲತೆಯಿಂದ ಕೂಡಿರುವುದಾಗಿದ್ದರೆ ಸರ್ವಫಲವನ್ನು ಉಂಟುಮಾಡುವುದರಿಂದ ಕೈಮುತಿಕನ್ಯಾಯದಿಂದಲೇ ಶಿಲ್ಪಜ್ಞಾನವು ಸತ್ರಯಾಗಕ್ಕಿಂತ ಅಧಿಕವಾಗಿರುವುದು ಎಂದು ತಿಳಿಯಬೇಕು. ಶಿಲ್ಪ ಜ್ಞಾನದ ಕುಶಲತೆಯು ಫಲವನ್ನು ಕೊಡುವುದಕ್ಕಿಂತ ಸತ್ರಯಾಗದ ಫಲವು ಬಹಳ ನ್ಯೂನವಾಗಿರುವುದು. ಕೆಲಸಕ್ಕೆಬಾರದ್ದಾಗಿ ಅತಿನಿಂದ್ಯ ವಾಗಿರುವುದು ಎಂದು ಕಿಂಚಿತ್ಪದದ ಅರ್ಥವು. ಅತಿ ನ್ಯೂನಾರ್ಥಕ ವಾದ ಕಿಂಚಿತ್ಪದದಿಂದಲೂಕೂಡ ಸತ್ರಯಾಗವನ್ನು ಶಿಲ್ಪಜ್ಞಾನದ ಸಂಗಡ ಹೋಲಿಸಿ ಹೇಳಲು ಆಗುವುದಿಲ್ಲ.

ಶಿಲ್ಪಜ್ಞಾನವು ಸರ್ವಫಲಜನಕವೆಂಬುವುದರಿಂದ ಸರ್ವಶಬ್ದವು ಇಲ್ಲಿ ಅನೇಕಾರ್ಥವನ್ನು ಬೋಧಿಸುವುದು. ಶಿಲ್ಪಜ್ಞಾನದಿಂದ ನಿರ್ಮಿಸಲ್ಪಟ್ಟ ಕಾರ್ಯಗಳು ಎಲ್ಲಕ್ಕಿಂತಲೂ ಉತ್ಕೃಷ್ಟವಾದ ಫಲ ಗಳನ್ನು ಸಾಧನೆ ಮಾಡಿಕೊಡುವುವು. ಈ ಶಿಲ್ಪಜ್ಞಾನವು ಸತ್ರಯಾಗ ಕ್ಕಿಂತಲೂ ಅತಿಶಯವಾದುದೆಂದು ಸತ್ರಾಧಿಕತ್ವವಾದವನ್ನು ಹೇಳಿರು ವುದು. ಇದರಿಂದ ಸತ್ರಯಾಗದಲ್ಲಿ ಉಂಟಾಗುವ ಫಲಕ್ಕಿಂತಲೂ ಪ್ರಶಸ್ತ ವಾದ ಫಲವು ಉಂಟಾಗುವುದೆಂಬುದಾಗಿ ಪ್ರಾಶಸ್ತ್ಯಜ್ಞಾನವು ಉಂಟಾ

**ನೋಚ್ಯತ ಇತಿ । ತತೋಽವಶ್ಯಂವಿಸೃಜತ ವಿಸೃಜತೋಪಕರಣಾನಿ ಜ್ಯೇಷ್ಠಾಃ । ಅಭ್ಯ-**

ಉದಾಸನೇ ತಾನಪಿ ಅತಿಪ್ರಶಸ್ತಫಲಜನಕತಾಬೋಧನ-ಮುಖೇನ ಪ್ರವರ್ತಯತಿ ಶ್ರುತಿಃ । ತತೋಽವಶ್ಯಂ........ ಜ್ಯೇಷ್ಠಾ ಇತಿ । ಜ್ಯೇಷ್ಠಾಃ = ಶ್ರೇಷ್ಠಾಃ ಪ್ರಶಸ್ತತಮಫಲ-ವಂತೋ ಯದಿ ಭವಿತುಮಿಚ್ಛೇತ ಯೂಯಂ ತರ್ಹಿ ವಿವಿಧೋಪಕರಣಾನಿ ಪೂರ್ವವಾಕ್ಯೋಕ್ತನಾನಾವಿಧಶಿಲ್ಪಾನಿ ವಿಸೃಜತ ವಿಶಿಷ್ಯ ನಿಷ್ಪಾದಯತೇತ್ಯರ್ಥಃ । ನನು ಅತಿ-

ದರೂ ಕೆಲವರು ಈ ಶಿಲ್ಪವನ್ನು ಆಚರಿಸುವುದರಲ್ಲಿ ಉದಾಸೀನರಾಗಿರುವರು. ಹೀಗೆ ಉದಾಸೀನತೆಯನ್ನು ಹೊಂದಿದವರಿಗೂಕೂಡ ಶಿಲ್ಪ ಜ್ಞಾನವು ಅತಿ ಪ್ರಶಸ್ತವಾದ ಫಲವನ್ನು ಕೊಡುವುದೆಂದು ಬೋಧಿಸುವುದು. ಈ ಪ್ರಕಾರವಾದ ಜ್ಞಾನವನ್ನು ಉಂಟುಮಾಡುವುದರ ಮೂಲಕವಾಗಿ ಶಿಲ್ಪದಲ್ಲಿ ಅವರಿಗೆ ಪ್ರವೃತ್ತಿಯುಂಟಾಗುವಂತೆ ಮಾಡುವುದು ಎಂದು "ತತೋ ಅವಶ್ಯಂ ಜ್ಯೇಷ್ಠಾಃ" ಎಂಬ ಸೂತ್ರವು ಬೋಧಿಸುವುದು.

ಜ್ಯೇಷ್ಠಾಃ-ಎಲೈ ಶ್ರೇಷ್ಠರಾದ ಮಹನೀಯರೇ, ನಿಮಗೆ ಅತಿ ಪ್ರಶಸ್ತವಾದ ಫಲವಾಗಬೇಕೆಂಬ ಇಚ್ಛೆಯು ಇದ್ದರೆ ನೀವು ಅನೇಕ ವಿಧವಾದ ಸಾಮಗ್ರಿಗಳುಳ್ಳದ್ದಾಗಿರುವ, ಹಿಂದಿನ ವಾಕ್ಯದಲ್ಲಿ ಉಕ್ತವಾದ, ಅನೇಕ ವಿಧವಾದ ಶಿಲ್ಪಗಳನ್ನು ಹೆಚ್ಚಾಗಿ ನಿರ್ಮಾಣ ಮಾಡಿರಿ ಎಂದು ಈ ಸೂತ್ರದ ಅರ್ಥವು.

ಪ್ರಶಸ್ತಂ ಫಲಂ ಮೋಕ್ಷಃ । ಸ ಚ ನಿಷ್ಕಾಮ್ಯೈರೇವ ಕರ್ಮಭಿಃ ಸಿಧ್ಯತಿ । ತಾನಿ ಚ ನಿತ್ಯಾನಿ ನೈಮಿತ್ತಿಕಾನಿ ಚ । ತೈರೇವ ಹಿ ದುರಿತಾನಿ ಕ್ಷೀಯೇರನ್ । ಅಥ ಚಿತ್ತಂ ಪ್ರಸೀದತಿ, ಅಥ ವಿಜ್ಞಾನಮಾವಿರ್ಭವತಿ, ಅಥ ಮುಚ್ಯತೇ । ಅತೋಽತಿ-ಪ್ರಶಸ್ತಫಲಜನಕತಾವಾದ ಉನ್ಮತ್ತಜಲ್ಪಿತಂ ಸ್ಯಾತ್। ಅತಶ್ಚ ವಿಗುಣಾದಸಿದ್ಧಿರ್ಮೋಕ್ಷಸ್ಯೇತಿ ಪ್ರಾಪ್ನೋತಿ, ನಿಷ್ಕಾಮತ್ವ-ರೂಪಗುಣೋ ಹ್ಯೇಷು ನ ಸಮನ್ವೇತೀತಿ ಚೇನ್ನ । ಕಿಂ

---

ಲೋಕದಲ್ಲಿ ಅತಿ ಪ್ರಶಸ್ತ ಫಲವೆಂದರೆ ಮೋಕ್ಷವೆಂದರ್ಥ. ಇದಕ್ಕಿಂತಲೂ ಬೇರೆಯಾವುದೂ ಅತಿ ಪ್ರಶಸ್ತವು ಇರುವುದಿಲ್ಲ. ಆದರೆ ಹೀಗೆ ಇರುವಮೋಕ್ಷವೆಂಬುವುದು ನಿಷ್ಕಾಮಕರ್ಮಾಚರಣೆಯಿಂದಲೇ ಉಂಟಾಗುವುದು. ನಿಷ್ಕಾಮಕರ್ಮಾಚರಣೆಯನ್ನು ಮಾಡಿದವರು ಈ ಪ್ರಕಾರವಾಗಿರುವ ಮೋಕ್ಷವನ್ನು ಹೊಂದುವರು. ನಿತ್ಯ ಮತ್ತು ನೈಮಿತ್ತಿಕವೆಂಬ ಕರ್ಮಗಳ ಆಚರಣೆಯಿಂದ ಪಾಪಗಳು ನಾಶವಾಗುವುದರ ಮೂಲಕ ಚಿತ್ತಶುದ್ಧಿಯು ಉಂಟಾಗುವುದು. ಚಿತ್ತಶುದ್ಧಿಯು ಉಂಟಾದನಂತರ ಚಿತ್ತೈಕಾಗ್ರತೆಯು ಹೆಚ್ಚಾಗುವುದು. ಇದರಿಂದ (ವಿಜ್ಞಾನವು) ವಿಶೇಷವಾದ ಜ್ಞಾನವು ಉಂಟಾಗಿ ಮುಕ್ತಿಯಾಗುವುದು ಎಂದು ಕ್ರಮವು ಇರುವುದು. ಈ ಕಾರಣದಿಂದ ನಿಷ್ಕಾಮಕರ್ಮಾಚರಣೆಯು ಈ ಶಿಲ್ಪಜ್ಞಾನ ಅಭ್ಯಾಸದಿಂದ ಉಂಟಾಗದೆ ಇರುವುದು. ನಿಷ್ಕಾಮ ಕರ್ಮಾಚರಣೆಯನ್ನು ಮಾಡುವುದರಿಂದ ಕರ್ಮದಲ್ಲಿ ವೈಗುಣ್ಯವು ಉಂಟಾಗುವುದು. ಅದರಿಂದ ಶಿಲ್ಪಜ್ಞಾನವು ಅತಿ ಪ್ರಶಸ್ತಫಲಜನಕವಾದದ್ದೆಂಬ ವಾದವು ಉನ್ಮತ್ತವಚನವೆಂದು ಕೆಲವರು ಅಭಿಪ್ರಾಯಪಡುವರು.

## ರ್ಚನೀಯೋಽಹಂ ಯಜ್ಞೈರ್ನೈವ ಲೋಕಸ್ಯ

ಕಾರಣಂ? ಯೋಗಾನುಗತಿಃ । ಕಾ ಸಾ? ತಾಮಾಹ ।
ಅಭ್ಯರ್ಚನೀಯೋಽಹಂ ಯಜ್ಞೈರ್ನೈವ ಲೋಕಸ್ಯ ಇತಿ ।
ಲೋಕಸ್ಯ ಫಲದರ್ಶಿನಃ ಸಕಾಮಸ್ಯೇತಿ ಯಾವತ್ । ಅಹ-
ಮಭ್ಯರ್ಚನೀಯ ಏವೇತ್ಯನ್ವಯಃ । ಸ್ಯಾಮಿತಿ ಶೇಷಃ ।
ಕಮನ್ಯಮರ್ಥಂ ವ್ಯಾವರ್ತಯತ್ಯೇವಕಾರಃ? ಅರ್ಥನೀಯ-
ರೂಪಮರ್ಥಂ । ತತಶ್ಚ ನಿಷ್ಕಾಮಕರ್ಮಾನುಷ್ಠಾನರೂಪಸ್ಯ
ಉಪಾಯಸ್ಯಾನು ಅನಂತರಂ ಗತಿಃ ಪ್ರಾಪ್ತಿರಿತಿ । ಅಯ-
ಮಭಿಸಂಧಿಃ । ಯೇ ಯೇ ಹೀಹಾತಿಶ್ರಮೇಣಾದರ್ಥಾಣಿ
ಫಲಾನಿ ಸಂಪಾದ್ಯಾನುಭವನ್ತಿ ತೇ ತೇಽಪೀತಿ ವದಂತಿ—

ಸಾಂಬಮೂರ್ತಿಯು ಫಲಾಪೇಕ್ಷೆಯುಳ್ಳ ಸಕಾಮರಾಗಿರುವವ ರಿಂದ ಪೂಜಿಸಿಕೊಳ್ಳುವವನಾಗಿರುವೆನು ಎಂದು ಅರ್ಥವುಳ್ಳ "ಅಭ್ಯರ್ಚನೀಯೋಽಹಂ ಯಜ್ಞೈರ್ನೈವ ಲೋಕಸ್ಯ" ಎಂದು ಹೇಳಿರುವನು. ಈ ವಾಕ್ಯದಲ್ಲಿ ಏವಕಾರವು ಇರುವುದು. ಈ ಏವಕಾರದಿಂದ ಅಭ್ಯರ್ಥನೀಯವಾದಕಾಮಗಳೆಲ್ಲವೂ ಪ್ರಾಪ್ತವಾದನಂತರ ನಿಷ್ಕಾಮಕರ್ಮಾಚರಣೆ ಉಂಟಾಗುವುದು. ಅಧಿಕವಾದ ಶ್ರಮಸಾಧ್ಯವಾದಕರ್ಮಗಳನ್ನು ಆಚರಿಸಿ ಅವುಗಳ ಫಲಗಳನ್ನು ಸಂಪಾದಿಸಿ ಅನುಭವಿಸುವರು. ಹೀಗೆ ಸಕಾಮವಾದ ಕರ್ಮಾಚರಣೆ ಮಾಡುವವರಿಗೆಲ್ಲರಿಗೂ "ನಾವು ಈ ಕಾರ್ಯ

**ಸರ್ವವ್ಯಾಪಾರವಿಮುಕ್ತಾಃ ಕದಾ ವಾ ಸುಖಿನೋ ಭವೇ-ಮೇತಿ। ಏವಮೇವ ತತ್ತನ್ನಶ್ವರಫಲಭೋಕ್ತೃಭಿರ್ಭವಿತವ್ಯಂ। ತತಶ್ಚ ಸಕಾಮಾಃ ಶಿಲ್ಪಿನಃ ತಾದೃಶಂ ಸುಖಂ ಗವೇಷೇರನ್। ತದನು ತದುಪಾಯಂ ಗವೇಷಮಾಣಾಶ್ಚ ಶಿಲ್ಪಶಾಸ್ತ್ರಂ ವಿಮೃಶೇಯುಃ। ವಿಮೃಶಂತಶ್ಚ ನಿಷ್ಕಾಮಶಿಲ್ಪಾನುಷ್ಠಾನಂ ತದುಪಾಯಂ ಜಾನೀರನ್ ವಿಹಿತೋಪಾಯಾಶ್ಚ ಮೋಕ್ಷ-ಮಶ್ನುವೀರನ್ ಇತಿ। ತದೇವಂ ಮೋಕ್ಷಪರ್ಯಂತಫಲ-ಸಾಧನತ್ವಾದತಿಪ್ರಶಸ್ತಂ ಶಿಲ್ಪಮಿತಿ ಸರ್ವಸ್ಯಾಪಿ ರುಚಿ-**

---

ಗಳಿಂದ ವಿಶ್ರಾಂತಿಯನ್ನು ಹೊಂದಿ ಯಾವಾಗ ಸುಖವಾಗಿ ಇರುವೆವು ಎಂದು ಇಚ್ಛೆಯು ಉಂಟಾಗುತ್ತದೆ. ಇವರ ಹಾಗೆಯೇ ಶಿಲ್ಪಿಗಳೂ ಕೂಡ ಸಕಾಮರಾಗಿ, ಫಲಾಪೇಕ್ಷೆಯಿಂದಲೇ ಕರ್ಮಗಳನ್ನು ಆಚರಿಸುವವರು. ಅನಂತರ ನಶ್ವರವಾದ ಫಲಾನುಭವದಿಂದ ವೈರಾಗ್ಯವು ಉಂಟಾಗಿ ನಿಷ್ಕಾಮಕರ್ಮಾಚರಣೆಯಿಂದ ಉಂಟಾಗುವ ಫಲವನ್ನು ಹೊಂದಲು ಪ್ರಯತ್ನಪಡುವರು. ಆಗ ಇವರಿಗೆ ನಿಷ್ಕಾಮ ಶಿಲ್ಪಾಚರಣೆಯೆಂಬ ಉಪಾಯವು ತಿಳಿಯುವುದು. ಈ ಪ್ರಕಾರವಾದ ನಿಷ್ಕಾಮ ಶಿಲ್ಪಜ್ಞಾನವು ಅತಿಪ್ರಶಸ್ತ ಫಲವಾದ ಮೋಕ್ಷಕ್ಕೆ ಉಪಾಯವೆಂದು ತಿಳಿದು ಅದನ್ನು ಆಚರಿಸಿ ಮೋಕ್ಷವನ್ನು ಹೊಂದುವರು. ಹೀಗೆ ಮೋಕ್ಷ ಪರ್ಯಂತವಾದ ಪ್ರಶಸ್ತವಾದ ಫಲವನ್ನು ಸಾಧಿಸುವ ಶಿಲ್ಪಾಚರಣೆಯು ಅತಿ ಪ್ರಶಸ್ತವಾಗಿರುವುದೆಂದು ಎಲ್ಲರಿಗೂ ಈ ಶಾಸ್ತ್ರದಲ್ಲಿ ಪ್ರವೃತ್ತಿಯು ಉಂಟಾಗುವಂತೆ ಈ ಸೂತ್ರವು ಶಿಲ್ಪದ ಅಭಿರುಚಿಯನ್ನು ಹೆಚ್ಚಿಸಿರುತ್ತದೆ.

ತಾನ್ಯೇವಂ ವೇದೀಕುಂಡರಥಪಾತ್ರಾದೀನ್ಯ-

ರುತ್ಪಾದಿತಾ । ಪ್ರಕೃತಂ ಶಿಲ್ಪಮಾಚರತಾಂ ಯದಾ ನೂತ್ನ-
ನೂತ್ನಾನಿ ಗೃಹದೇವಾಲಯಾದಿನಿರ್ಮಾಣಾನಿ ಕರ್ತವ್ಯ-
ತಯಾ ಆಪತನ್ತಿ ತೇಷಾಂ ಕರ್ತವ್ಯಾರ್ಥಜ್ಞಾನೋಪಾಯ-
ಮಾಹ । ತಾನ್ಯೇವಂ ಅಭ್ಯೂಹಯತ ಇತಿ । ಯಾನಿ ಕ್ವಚಿ-
ದ್ವಿಷಯೇ ವೇದೀಕುಂಡಾದೀನ್ಯುಪದಿಷ್ಟಾನಿ ತಾನಿ । ಏವಂ
ಉಪದಿಷ್ಟಪ್ರಕಾರೇಣೈವ ಅಭ್ಯೂಹಯತ, ಅನುಪದಿಷ್ಟ-
ವಿಷಯೇಽಪಿ ಊಹೇನ ಜಾನೀಧ್ವಮಿತ್ಯರ್ಥಃ । ನ ಕೇವಲಂ

ಶಿಲ್ಪ ಕಾರ್ಯಗಳನ್ನು ಆಚರಿಸುವವರಿಗೆ ಹೊಸಹೊಸದಾದ ಗೃಹ, ದೇವಾಲಯ, ಇವೇ ಮೊದಲಾದವುಗಳ ನಿರ್ಮಾಣವು ಅವಶ್ಯ ಕರ್ತವ್ಯವಾಗಿರುವಾಗ ಆಯಾಯ ಕಾರ್ಯರಚನಾನುಕೂಲವಾದ ಶಿಲ್ಪಗಳನ್ನು ಊಹಿಸಿ ಆಚರಿಸುವುದು ಕರ್ತವ್ಯಾರ್ಥಸಿದ್ಧಿಯನ್ನು ಸಾಧಿಸುವ ಜ್ಞಾನೋಪಾಯವಾಗಿರುತ್ತದೆ. "ತಾನ್ಯೇವಮಭ್ಯೂಹಯತ" ಎಂದು ಸೂತ್ರವು ಈ ವಿಷಯವನ್ನು ಬೋಧಿಸುತ್ತದೆ. ವೇದಿ, ಕುಂಡ, ಮೊದಲಾದ ವಿಷಯಗಳು ಉಪದಿಷ್ಟವಾಗಿರುವವು. ಅದರಂತೆ ಇತರ ವಸ್ತುಗಳ ನಿರ್ಮಾಣಕ್ರಮವನ್ನು ಸಹ ಈ ಶಿಲ್ಪಶಾಸ್ತ್ರದಲ್ಲಿ ಉಕ್ತವಾಗಿರುವ ಕ್ರಮವನ್ನು ಅನುಸರಿಸಿ ಊಹಿಸಿ ಕಾರ್ಯಗಳನ್ನು ನಿರ್ಮಿಸಬೇಕು. ಕೆಲವು ಕಡೆಗಳಲ್ಲಿ ಶಿಲ್ಪಶಾಸ್ತ್ರದಲ್ಲಿ ಹೇಳದಿದ್ದರೂ ಅವುಗಳನ್ನು ಆಯಾಯ ಕಾರ್ಯಗಳಿಗೆ ಅನು

ಭ್ಯೂಹಯತ | ಕಾರಯತಾಧ್ವರಾನ್ ಸರ್ವೈ-
ರಪಿ ಲೋಕೈರನುಶ್ರುತಮಿತಿ | ಏಕೈಕಸ್ಯೈ-

ಯುಷ್ಮಾಸ್ವೇವೈಷಾ ಶಿಲ್ಪವಿದ್ಯಾ ಲೀಯತಾಂ ಅಪಿ ತು
ಸರ್ವತ್ರ ಪ್ರಚಾರ್ಯತಾಂ ಯುಷ್ಮಾಭಿರಿತ್ಯಾಹ । ಕಾರಯ
........ಲೋಕೈರಿತಿ । ಅಧ್ವರಾನ್ ಯಜ್ಞಾನ್ ಶಿಲ್ಪರೂಪಾನ್
ಸರ್ವೈರಪಿ ಲೋಕೈಃ ಕಾರಯತ ಇತ್ಯನ್ವಯಃ। ಏವಂ
ಪ್ರವರ್ತಮಾನಾನಾಂ ಶಿಷ್ಯಾಣಾಂ ಪ್ರಾಮಾದಿಕಂ ಯಥೇ-
ಚ್ಛಾಚರಣಂ ನಿರುಣದ್ಧಿ । ಅನುಶ್ರುತಿಮಿತಿ । ಶಿಲ್ಪಶ್ರುತಿ-

ಸಾರವಾಗಿ ಊಹೆಯಿಂದ ತಿಳಿಯಬೇಕು ಮತ್ತು ಶಿಲ್ಪ ವಿದ್ಯೆಯನ್ನು ನೀವು ಹೀಗೆ ಚೆನ್ನಾಗಿ ಅಭ್ಯಾಸಮಾಡಿ ಕಲಿತು ತಿಳಿದುಕೊಂಡು ಯಾರಿಗೂ ಉಪದೇಶಮಾಡದೆ ಇರಬೇಕೆಂದು ಈ ಶಾಸ್ತ್ರದಲ್ಲಿ ಹೇಳು ವುದಿಲ್ಲ. ಇದನ್ನು ಎಲ್ಲರೂ ತಿಳಿಯುವಹಾಗೆ ಪ್ರಚಾರಮಾಡಿರಿ ಎಂದು ಉಪದೇಶವನ್ನು ಬೋಧಿಸುವುದಕ್ಕಾಗಿಯೇ "ಕಾರಯಧ್ವಮಧ್ವರಾನ್" ಎಂಬುದಾಗಿ ಸೂತ್ರವು ಹೇಳುತ್ತದೆ. ಶಿಲ್ಪರೂಪವಾದ ಯಜ್ಞಗಳನ್ನು ಎಲ್ಲರೂ ಆಚರಿಸುವಂತೆ ನೀವು ಮಾಡಿರಿ ಎಂಬ ಅಭಿಪ್ರಾಯವನ್ನು ಈ ಸೂತ್ರವು ಬೋಧಿಸುವುದು.

ಆದರೆ ಶಿಷ್ಯರು ಮನಸ್ಸು ಬಂದಹಾಗೆ ಶಿಲ್ಪಶಾಸ್ತ್ರವನ್ನು ಪ್ರಚಾರ ಮಾಡುವಾಗ ಯಥೇಚ್ಛಾಚರಣೆಯು ಸರಿಯಾದದ್ದಲ್ಲವೆಂದು ಅದನ್ನು

ಕೈಕೋಽಧ್ಯಕ್ಷ ಇತಿ ವೇದಸ್ಯ। ತತ್ರಾಥರ್ವಣ-
ಶ್ಶಿಲ್ಪಭೂಯಿಷ್ಠಮತ್ಯಂತಂ । ಮನ್ತ್ರೇಣೈವ

ಮನುಸ್ಮೃತ್ಯೇತ್ಯರ್ಥಃ । ಶ್ರುತ್ಯನುಸರಣಪ್ರಕಾರಂ ದರ್ಶಯತಿ।
ಏಕೈಕಸ್ಯೇತ್ಯಾದಿನಾ । ಏಕೈಕಸ್ಯ ವೇದಸ್ಯೈಕೈಕೋಽಧ್ಯಕ್ಷ
ಇತಿ । ವೇದನೀಯಮಿತಿ ಶೇಷಃ । ತತ್ರ ತಾದೃಶವೇದ
ಘಟಿಕಾಥರ್ವವೇದಸ್ಯ ಪ್ರತಿಪಾದ್ಯಂ ವಸ್ತು ಶಿಲ್ಪಭೂಯಿಷ್ಠಂ
ಭವತೀತ್ಯರ್ಥಃ । ನ ಕೇವಲಂ ಕ್ವಚಿದೇವ ಅಪಿ ತು ಅಂತ-
ಮತೀತ್ಯಾಪಿ ಸಮಾಪ್ತಿಪರ್ಯಂತಮಿತ್ಯರ್ಥಃ । ಯಾನಿ

ನಿರೋಧಿಸುವುದು ಉತ್ತಮವು ಶಿಲ್ಪ ಶಾಸ್ತ್ರವನ್ನು ಅನುಸರಿಸಿ ಕರ್ತವ್ಯ
ಕರ್ಮಾನುಸಾರವಾದ ಕಲ್ಪನೆಗಳನ್ನು ಊಹಿಸುವ ಕ್ರಮವನ್ನು ಅನು
ಸರಿಸಿ ಶಿಲ್ಪವನ್ನು ಪ್ರಚಾರಮಾಡುವುದು ಪ್ರಾಮಾದಿಕವಲ್ಲ ಎಂದು
ಅಭಿಪ್ರಾಯವು. ಶ್ರುತ್ಯನುಸರಣಪ್ರಕಾರವು ಒಂದೊಂದುವೇದದಲ್ಲಿ
ಒಂದೊಂದುಪ್ರಕಾರವಾಗಿರುವುದು. ಒಂದೊಂದು ವೇದದಿಂದ ತಿಳಿಯ
ಬೇಕಾದ ಜ್ಞಾನವು ಒಂದೊಂದು ವಿಧವಾಗಿರುವಂತೆ, ಅಥರ್ವಣ ವೇದ
ದಿಂದ ತಿಳಿಯಬೇಕಾದ ಶಿಲ್ಪಜ್ಞಾನವು ಬಹಳವಾಗಿರುವುದು. ಅಥರ್ವಣ
ವೇದದಲ್ಲಿ ಹೇಳಲ್ಪಡದಿರುವ ಶಿಲ್ಪವಿಷಯಗಳು ಇತರ ಕಡೆ
ಯಲ್ಲಿಯೂ ಹೇಳಲ್ಪಟ್ಟಿರುತ್ತವೆ. ಆದರೆ ಅಥರ್ವಣವೇದದ ಉಪಕ್ರಮ
ದಿಂದಸಮಾಪ್ತಿ ಪರ್ಯಂತವಾಗಿಯೂ ಶಿಲ್ಪಜ್ಞಾನವಿಷಯವಾದ ವಸ್ತುವು
ಹೆಚ್ಚಾಗಿ ಬೋಧಿತವಾಗಿರುತ್ತದೆ. (ಆರಾಧನೆ) ಪೂಜೆಯನ್ನು ಮಾಡ

ಸ್ವರೂಪಾಣಿ ಪ್ರಕರ್ತವ್ಯಾನಿ । ಧ್ಯಾನೇನೈವ ಪಶ್ಯಂತಿ ತದ್ರೂಪಂ । ರೂಪೇಣೈವ ಧ್ಯಾಯಂತೇ ತದ್ದೈವತಂ । ರೂಪಮೇವ ತಚ್ಛಿಲ್ಪಂ ।

ಆರಾಧನೀಯಾನಿ ದೈವತಾನಿ ತೇಷಾಂ ಸ್ವರೂಪಾಣಿ ಮನ್ತ್ರೋಪದಿಷ್ಟರೂಪಾಣ್ಯೇವಾವಗಂತವ್ಯಾನಿ । ಯೇ ಪುನರ್ಮುನಯಸ್ತೇ ತು ಧ್ಯಾನೇನೈವ ತದ್ರೂಪಂ ಪಶ್ಯಂತಿ । ರೂಪೇಣೈವ ಧ್ಯಾಯಂತೇ ತದ್ರೂಪಮಿತಿ ಪೂರ್ವೋಕ್ತಧ್ಯಾನಸಾಧನದೈವತದರ್ಶನೇ ಹೇತುಃ । ಸಾಕಾರಧ್ಯಾನಾದಿತಿ ತದರ್ಥಃ ।ಉಕ್ತಸ್ಯ ರೂಪವತ್ತ್ವಸ್ಯ ಪ್ರಕೃತೋಪಯೋಗಂ

ಬೇಕಾಗಿರುವ ದೇವತಾ ಸ್ವರೂಪಗಳು ಮಂತ್ರದಲ್ಲಿ ಹೇಳಿರುವ ಕ್ರಮಕ್ಕನುಸಾರವಾಗಿ ಇರುವವುಗಳೆಂದು ತಿಳಿಯಬೇಕಾಗಿರುತ್ತದೆ. ಮುನಿಗಳಾದವರು ಮಂತ್ರದಲ್ಲಿ ಉಪದಿಷ್ಟವಾದ ಆಕಾರವನ್ನು ಧ್ಯಾನದಿಂದ ಸಾಕ್ಷಾತ್ಕಾರ ಮಾಡುತ್ತಿರುವರು. ಮಂತ್ರೋಕ್ತವಾದ ದೇವತಾ ಸ್ವರೂಪವನ್ನು ಧ್ಯಾನದಿಂದ ಸಾಕ್ಷಾತ್ಕರಿಸುವ ಮುನಿಗಳು ದೇವತಾ ರೂಪವನ್ನು ಅನುಸರಿಸಿರುವ ಆಕೃತಿಯನ್ನು ಮಾಡಿಕೊಂಡು ಅದನ್ನು ಧ್ಯಾನದಿಂದಲೂ ಕಾಣುವರು. ತದ್ರೂಪವೆಂಬಪದಕ್ಕೆ ಹಿಂದೆ ಹೇಳಿರುವ ಧ್ಯಾನಸಾಧನವಾದ ದೇವತಾ ಸ್ವರೂಪವೆಂದು ಅಭಿಪ್ರಾಯವು. ಸಾಕಾರಧ್ಯಾನವೆಂದು ತಿಳಿಯಬೇಕು. ಸಾಕಾರವಾದ ದೇವತಾರೂಪ ನಿರ್ಮಾಣವೆಂಬುವುದು ಶಿಲ್ಪವಾಗಿರುತ್ತದೆ. ಶಿಲ್ಪವೆಂದರೆ ದೇವತೆಯರೂಪವು ಶಿಲ್ಪನಿಷ್ಪಾದ್ಯವೆಂದು ತಿಳಿಯತಕ್ಕದು. ದೇವತಾ ರೂಪವನ್ನು ನಿರ್ಮಿ

ತಾಮ್ರಯೋರ್ದಾರುಶಿಲಾತಾಮ್ರಹಿರಣ್ಯವಿಕಾ-
ರಾಣಿ । ಮೃದಾದೀನ್ಯಧಮಾನಿ । ಯದ್ಯ-
ಸ್ಯೋಕ್ತಂ ತದ್ವಿಕಾರಂ ತಸ್ಯ । ಆಯತನವಂತಿ
ವೈ ಸರ್ವಾಣ್ಯಪಿ ದೈವತಾನಿ । ಏವಮೇವಾ-

---

ದರ್ಶಯತಿ । ರೂಪಮೇವ ತಚ್ಛಿಲ್ಪಮಿತಿ । ಯದೇತದ್ದೈ-
ವತರೂಪಂ ತಚ್ಛಿಲ್ಪನಿಷ್ಪಾದ್ಯಮಿತ್ಯರ್ಥಃ । ನಿಷ್ಪಾದನೀಯ-
ದೇವತಾಕಾರೋಪಾದಾನಕಾರಣಾನ್ಯಾಹ । ತಾಮ್ರಯೋ-
ದಾರು ........ ನ್ಯಧಮಾನೀತಿ । ಸ್ಪಷ್ಟೋಽರ್ಥಃ । ಯಸ್ಯ
ಯತ್ಸಾಧನಮುಕ್ತಂ ತಾದೃಶೋಪಾದಾನಸಾಧನಸ್ಯ ವಿಕಾ-
ರೋಽಪಿ ತತ್ಸಾಧನಂ ಜಾನೀಯಾತ್ ಇತ್ಯರ್ಥಃ । ಏವಂ
ದೇವತಾಕಾರಸ್ಯ ಶಿಲ್ಪನಿಷ್ಪಾದ್ಯತಾಮುಕ್ತ್ವಾ ತದಾಲಯಾ-

---

ಸಲು ಕಬ್ಬಿಣ, ಮರ, ಕಲ್ಲು, ತಾಮ್ರ, ಚಿನ್ನ, ಇವೇ ಮೊದಲಾದವುಗಳು
ಮುಖ್ಯ ಕಾರಣವಾಗಿರುತ್ತವೆ. ಮೃತ್ತಿಕೆಯೇ ಮೊದಲಾದವುಗಳು
ಅಧಮವಾಗಿರುವುವು. ಯಾವ ದೇವತೆಯ ರೂಪವನ್ನು ನಿರ್ಮಿಸಲು
ಯಾವುದು ಸಾಧನವಾಗಿರುತ್ತದೆಯೆಂದು ಉಕ್ತವಾಗಿರುವುದೋ ಆ ಪ್ರಕಾ
ರವಾದ ಉಪಾದಾನಸಾಧನದ ವಿಕಾರವೂ ಕೂಡ ರೂಪ ನಿರ್ಮಾಣದ
ವಿಷಯದಲ್ಲಿ ಸಾಧನವಾಗಿರುತ್ತದೆ ಎಂದು ತಿಳಿಯಬೇಕು. ದೇವತಾ
ರೂಪವು ಶಿಲ್ಪನಿಷ್ಪಾದ್ಯವಾಗಿರುವಂತೆ ದೇವತಾ ಆಲಯಾದಿಗಳೂ ಕೂಡ

ಪರಾಣ್ಯಪಿ ಶಿಲ್ಪವಿಲಸಿತಾನಿ ಕರ್ಮಾಣಿ ।
ಭವಂತ್ಯೇತಾನಿ ಚ ಮೋಕ್ಷಪ್ರದಾನಿ। ಸಂಪ-
ದ್ಯೇರ್ರ ಸರ್ವಕಲ್ಯಾಣಾನಿ ಲೋಕಾಃ ।

ದೀನಾಮಪಿ ಶಿಲ್ಪನಿಷ್ಪಾದ್ಯತಾಮಾಹ । ಆಯತನವಂತೀ-
ತ್ಯಾದಿನಾ । ಸ್ಪಷ್ಟೋಽರ್ಥಃ । ಏತಾನ್ಯಪಿ ಚ ಮೋಕ್ಷಪ್ರದಾನಿ
ಮೋಕ್ಷಪ್ರದತ್ವಂ ವಿವೃತಮಂತ್ರಾವಧೇಯಂ । ಆದರಾರ್ಥ-
ಮುಕ್ತಮೇವ ಫಲವತ್ತ್ವಂ ಶಬ್ದಾಂತರೇಣಾಹ । ಸಂಪದ್ಯೇ-
ರನ್ನಿತಿ । ಅಕರ್ಮಕೋ ಧಾತುಃ ಅತಃ ಹೇ ಲೋಕಾ ಇತಿ
ಸಂಬೋಧನಂ । ಅತಃ ಕಲ್ಯಾಣಜನಕಶಿಲ್ಪಪ್ರಚಾರೇಣ

ಶಿಲ್ಪದಿಂದಲೇ ನಿರ್ಮಿತಗಳಾಗಿರುತ್ತವೆ.ಎಂಬುದಾಗಿ "ಆಯತನವಂತಿ" ಎಂಬಸೂತ್ರದಿಂದ ಉಕ್ತವಾಗಿರುವುದು. ಇವರಹಾಗೆಯೇ ಇತರವಾದ ಕರ್ಮಗಳೂಕೂಡ ಶಿಲ್ಪಪ್ರಾಚುರ್ಯವೇ ಆಗಿರುತ್ತವೆ. ಈ ಶಿಲ್ಪ ಕರ್ಮಗಳೆಲ್ಲವೂಮೋಕ್ಷವನ್ನು ಅನುಗ್ರಹಿಸುವವುಗಳಾಗಿರುತ್ತವೆ, ಎಂದು ವಿವರಿಸಲ್ಪಟ್ಟಿರುತ್ತದೆ. ಶಿಲ್ಪವು ಮೋಕ್ಷಪ್ರದವಾಗಿರುವುದು ಎಂದು ಉಕ್ತವಾದಅರ್ಥವನ್ನೇ ಆದರವನ್ನು ವ್ಯಕ್ತಪಡಿಸುವುದಕ್ಕಾಗಿ ಫಲ ವತ್ತಾಗಿರುವುದೆಂದು ನಿರ್ದೇಶಮಾಡಿ ಹೇಳುತ್ತದೆ.

ಎಲೈ ಪೂಜ್ಯರಾದ ಮನುಷ್ಯರೇ, ನೀವೆಲ್ಲರೂ ಕಲ್ಯಾಣವನ್ನೂ ಉಂಟುಮಾಡುವ ಶಿಲ್ಪಜ್ಞಾನ ಪ್ರಚಾರದಿಂದ ಹೆಚ್ಚಾದ ಪರೋಪಕಾರ ವನ್ನು ಮಾಡಿರುವಕಾರಣ ಶಿಲ್ಪಪ್ರಚಾರ ಮಾಡುವವರಿಗೆ ಉಂಟಾ

ಸಂಚಿನುಯಾತ್ಪುಣ್ಯಮೇಭಿಃ ಶಿಲ್ಪೈರಿತಿ ।
ಬ್ರಾಹ್ಮಣಾನಾಮೇತದ್ಭವತಿ ಶಿಲ್ಪಂ। ಯದ್ಯ-
ಬ್ರಾಹ್ಮಣೋ ಭವೇನ್ನ ಶಿಲ್ಪೀತಿ । ಅಬ್ರವೀ-
ದೇವಂ ಪುನರಾಚಾರ್ಯಃ ಸರ್ವಜ್ಞಃ ।
ಯದಾ ಯದಾವಹೀಯತೇ ಲೋಕಾದಸ್ಮಾ-

---

ಪರೋಪಕಾರಸ್ಯ ಮಹತಃಕೃತತ್ವಾತ್ ಪ್ರಚಾರಯಿತು -
ರ್ಮಹತ್ಪುಣ್ಯಂ ಸ್ಯಾದಿತ್ಯಾಹ । ಸಂಚಿನುಯಾದಿತಿ....ರಿತಿ ।
ಶಿಲ್ಪಾಸುಷ್ಠಾನಾಧಿಕಾರಿಣಂ ಉಪದಿಶತಿ ಅನಧಿಕಾರಿಣಂ ಚ
ವ್ಯುದಸ್ಯತಿ । ಬ್ರಾಹ್ಮಣಾನಾಮಿತಿ... ....ನ ಶಿಲ್ಪೀತಿ । ಅಸ-

---

ಗುವ ಪುಣ್ಯವು ಬಹಳವಾಗಿರುವುದು ಎಂದು ಕಲ್ಯಾಣಾನಿ ಸಂಪದ್ಯೇರ್ರ
ಎಂಬ ಸೂತ್ರಕ್ಕೆ ಅರ್ಥವು. ಈ ಶಿಲ್ಪಗಳಿಂದ ಪುಣ್ಯವನ್ನು ಬಹಳ
ಮಟ್ಟಿಗೆ ಶೇಖರಿಸಬೇಕುಎಂದು ಅರ್ಥವು

"ಬ್ರಾಹ್ಮಣಾನಾಂ" ಎಂಬ ಸೂತ್ರದಿಂದ ಶಿಲ್ಪವನ್ನು ಅಭ್ಯಾಸ ಮಾಡುವ ಮತ್ತು ಪ್ರಚಾರಮಾಡುವ (ಯೋಗ್ಯತೆಯುಳ್ಳವರನ್ನು) ಅಧಿಕಾರಿಗಳನ್ನು ನಿರ್ದೇಶಮಾಡಿರುತ್ತದೆ. ಇದರಂತೆಯೇ ಇದರ ಮುಂದಿನ ಸೂತ್ರವಾದ ಅಬ್ರಾಹ್ಮಣ ಎಂಬ ಸೂತ್ರದಿಂದ ಶಿಲ್ಪದ ವಿಷಯದಲ್ಲಿ ಅಧಿಕಾರಿಗಳಲ್ಲದವರನ್ನು ನಿರ್ದೇಶ ಮಾಡಿರುತ್ತದೆ. ಇದರಿಂದ ಅಧಿಕಾರವುಳ್ಳವರನ್ನು ಸ್ವೀಕರಿಸುವುದೂ, ಅಧಿಕಾರಿಗಳಲ್ಲದವರನ್ನು ತ್ಯಾಗ ಮಾಡುವುದೂ ಸಹ ನಿರ್ದಿಷ್ಟವಾಗಿ ಇರುತ್ತದೆ.

ದ್ಧರ್ಮಾಗ್ಂ ಶಿಲ್ಪರೂಪಂ । ತದ್ವೈವಾವಿ-
ರ್ಭೂಯತೇ ಭಗವಾನ್ವಿಶ್ವಕರ್ಮಾತ್ಮನಸ್ತೇ-
ಜಸಃ ಪ್ರಕಲ್ಪ್ಯಾಕಾರಾನ್ । ತಸ್ಮಾದೇವ
ಪ್ರಜಾಪತ್ಯೃಷಯಃ ಪ್ರಜಾಯಂತೇ ಶಿಲ್ಪ-
ವಿಭವಃ । ತೇಭ್ಯ ಏವ ಪಾರಂಪರ್ಯಾಗ್ಂ
ಸಮಾಗತಂ ಭವತಿ ಶೈಲ್ಪಿಕಮಾಚಾರ್ಯತ್ವಂ

---

ಕೃದಾಮ್ರೇಡಿತಂ ವೇದಶಿಲ್ಪನಿತ್ಯತ್ವಂ ತದುಚ್ಛೇದಶಂಕಾ-
ವ್ಯುದಸನಪುರಃಸರಂ ಪ್ರತಿಷ್ಠಾಪಯತಿ । ಅಬ್ರವೀದೇವ-
ಮಿತ್ಯಾದಿನಾ ಶೈಲ್ಪಿಕಮಾಚಾರ್ಯತ್ವಂ ಚೇತ್ಯಂತೇನ ।
ಸ್ಪಷ್ಟೋಽರ್ಥಃ । ಯೇ ಹಿ ಭಗವತೋ ಮುಖಾತ್ತೇಜೋಂ-
ಶಾತ್ ಪಂಚಪುರುಷಾಃ ಜಾತಾಸ್ತೇ ಏವ ಮಹಾಂತಃ

---

ವೇದ ಶಿಲ್ಪ ನಿತ್ಯತ್ವವನ್ನು ಅನೇಕ ವಿಧವಾಗಿ ಹೇಳಿರುವುದು. " ಅಬ್ರವೀತ್ ಏವಂ " ಎಂಬ ಸೂತ್ರವನ್ನು ಮೊದಲು ಮಾಡಿಕೊಂಡು ' ಶೈಲ್ಪಿಕಮಾಚಾರ್ಯತ್ವಂ ಚ ' ಎಂಬ ಸೂತ್ರಗಳಿಂದ ವೇದ ಶಿಲ್ಪದ ನಿತ್ಯತ್ವವನ್ನು ನಿರಾಸಮಾಡುವ ಶಂಕಾ ಸಮಾಧಾನಗಳನ್ನು ವಿವರಿಸಿ ದೃಢಪಡಿಸುತ್ತದೆ. ಪರಮೇಶ್ವರನಾದ ಪೂಜ್ಯನಾದ ವಿಶ್ವಕರ್ಮನ ಮುಖದ ತೇಜಸ್ಸಿನ ಅಂಶದಿಂದ ಹುಟ್ಟಿರುವ ಐದುಜನರುಗಳೂ ಬಹಳ ಮಹಿಮೆಯುಳ್ಳವರಾಗಿ ದೇವತೆಗಳಿಗೂ ಆಚಾರ್ಯರಾಗಿ ಪ್ರಕಾಶಿಸು

**೮ । ದೇವಾನಾಮುಪ್ಯಾಚಾರ್ಯಾಸ್ತ ಏವ ವಿಭ್ರಾಜಂತೇ ಮಹಾಂತಃ । ನಿರುಕ್ತಾಸ್ತೇ ಭವನ್ತ್ಯಾದಿಕರ್ತಾರೋ ಲೋಕಪ್ರವರ್ತಕಾಃ ।**

---

**ದೇವಾನಾಮುಪ್ಯಾಚಾರ್ಯಾ ವಿಭ್ರಾಜಂತೇ ಇತ್ಯನ್ವಯಃ । ಯಥೋಕ್ತಪ್ರಕಾರೇಣ ಪಂಚಾನಾಂ ಲೋಕಕರ್ತೃತ್ವಾದೇವ**

---

ತ್ತಿರುವರು. ಅವರುಗಳು ಹಿಂದೆ ನಿರ್ದೇಶ ಮಾಡಿರುವಂತೆ ಈ ಐದು ಜನಗಳೂ ಲೋಕ ಕರ್ತೃಗಳಾಗಿ ಇರುವುದರಿಂದ ಇವರೇ ಶಿಲ್ಪದ ಆದಿ ಕರ್ತೃಗಳಾಗಿರುವರು ಎಂದು ಮುಂದಿನ ವಾಕ್ಯದ ತಾತ್ಪರ್ಯವಾಗಿ ರುತ್ತದೆ. ಸರ್ವಜ್ಞನಾದ ಆಚಾರ್ಯನು ಶಿಲ್ಪದ ವಿಷಯದಲ್ಲಿ ಅಧಿಕಾ ರಿಗಳನ್ನು ಈ ಪ್ರಕಾರವಾಗಿ ವಿಂಗಡಿಸಿ ಹೇಳಿರುವನು. ಈ ಲೋಕದಲ್ಲಿ ಶಿಲ್ಪ ರೂಪವಾದ ಧರ್ಮವು ಕ್ಷೀಣವಾದಾಗ ಪೂಜ್ಯನಾದ ವಿಶ್ವಕರ್ಮನು ತನ್ನ ತೇಜಸ್ಸಿನಿಂದ ಬೇರೆಬೇರೆಯಾದ ಆಕಾರಗಳನ್ನು ಹೊಂದಿ ಅವ ತಾರ ಮಾಡುವನು. ಪ್ರಜಾಪತಿಗಳೆಂದು ಹೆಸರನ್ನು ಹೊಂದಿರುವ ಬ್ರಹ್ಮರುಗಳೂ, ಋಷಿಗಳೂ ಕೂಡ ಈ ವಿಶ್ವಕರ್ಮನಿಂದಲೇ ಉತ್ಪತ್ತಿ ಯನ್ನು ಹೊಂದುವರು ಇವರಿಂದಲೇ ಶಿಲ್ಪದ ಮಹಿಮೆಯು ಹೊರ ಪಡುವುದು. ಮತ್ತು ಶಿಲ್ಪದ (ವಿಭವ) ಮಹಿಮೆಯು ಇವರಿಂದಲೇ ಲೋಕದಲ್ಲಿ ಪಾರಂಪರ್ಯಕ್ರಮವಾಗಿ ಪ್ರಕಟವಾಗಿರುತ್ತದೆ. ಶಿಲ್ಪ ಜ್ಞಾನದ ಸಂಬಂಧವಾದ ಆಚಾರ್ಯತ್ವವೂ ಕೂಡ ವಂಶಪಾರಂ

ತದ್ದ್ವಿವಿಧಮೇವಗ್ಂ ಶಿಲ್ಪಂ ದೈವಂ ಮಾ-
ನುಷಂ ಚೇತಿ । ನಾಭಾನೇದಿಷ್ಠಾದೀನ್ಯತ್ರ
ಪ್ರಥಮಾನಿ । ಅನ್ಯಾನಿ ಮಾನುಷಾಣೀತ್ಯು-
ಚ್ಯಂತೇ । ದೇವಮೂರ್ತಿದೇವಾಯತನೇ -

---

ಆದಿಕರ್ತೃತ್ವಮಿತ್ಯನಂತರವಾಕ್ಯತಾತ್ಪರ್ಯಂ।ದೈವಮಾನುಷ ಭೇದೇನಶಿಲ್ಪಂ ವಿಭಜತೇ । ತದಿತಿ । ತೇ ಉಭೇ ನಾಮತೋ ನಿರ್ದಿಶತಿ । ನಾಭೇತಿ । ತಯೋರ್ಮಧ್ಯೇ ದೈವಮಾಹ । ದೇವಮೂರ್ತೀತಿ । ಮಾನುಷಮಾಹ । ಮಾನುಷಂ ಚೇತಿ ।

---

ಪರ್ಯಕ್ರಮವಾಗಿ ಉಂಟಾಗಿರುತ್ತದೆ. ಇವರು ದೇವತೆಗಳಿಗೂ ಕೂಡ ಗುರುಗಳಾಗಿ ಆಚಾರ್ಯರೆಂದು ಹೆಸರನ್ನು ಹೊಂದಿ ದೊಡ್ಡವರೆಂದು ಪ್ರಸಿದ್ಧರಾಗಿರುತ್ತಾರೆ. ಇವರು ಲೋಕಪ್ರವರ್ತಕರೆಂದು ಪ್ರಸಿದ್ಧರಾಗಿರುವರು. ಆದಿಯಲ್ಲಿ ಶಿಲ್ಪಜ್ಞಾನವನ್ನು ಪ್ರಕಟಿಸಿ‌ಮಾಡಿರುವರು.

ಶಿಲ್ಪವು ದೈವ ಮಾನುಷ ಎಂಬ ಭೇದದಿಂದ ಎರಡು ವಿಧವಾಗಿರುತ್ತದೆ. ಇವೆರಡರಲ್ಲಿ "ನಾಭಾನೇದಿಷ್ಠಾದೀನಿ" ಎಂದು ಸೂತ್ರದಲ್ಲಿ ಹೇಳಿರುವ ಶಿಲ್ಪವು ದೈವವೆಂದು ಪ್ರಸಿದ್ಧವಾಗಿರುವುದು. ಇದಕ್ಕಿಂತಲೂ ಬೇರೆಯಾಗಿರುವುದನ್ನು ಮಾನುಷಶಿಲ್ಪವೆಂದು ಕರೆಯುತ್ತಾರೆ. ದೇವತಾಮೂರ್ತಿ ನಿರ್ಮಾಣ, ದೇವಾಲಯ ನಿರ್ಮಾಣ ಇವೆಲ್ಲವೂ ದೈವಶಿಲ್ಪವೆನಿಸಿರುತ್ತದೆ. ಇದು ಅನೇಕ ವಿಧವಾಗಿರುವುದರಿಂದ ವಿಚಿತ್ರವೆಂದು ಸೂತ್ರದಲ್ಲಿ ಉಕ್ತವಾಗಿರುತ್ತದೆ.

**ಷ್ಟ್ಯಾದಿಕಂ ಭವತಿ ಸರ್ವಂ ದೈವಮಿತಿ ವಿಚಿ-
ತ್ರಗ್ಂ ಶಿಲ್ಪಂ। ಮಾನುಷಂ ಚೈವಂ ಭವತಿ
ಶಸ್ತ್ರಾಸ್ತ್ರಯಂತ್ರಹಲಪ್ರಾಸಾದವಾಪ್ಯಾಭರ-
ಣಾದೀನೀತಿ। ತಯೋರೇವಗ್ಂ ಶಿಲ್ಪಯೋ-
ರ್ಭವಂತಿ ವಾಗೀಶ್ವರೀ ಮೇರ್ವಾದೀನ್ಯುಪ-**

---

ಶಿಲ್ಪದ್ರವ್ಯಸಾಧನಾನ್ಯಾಹ । ತಯೋರಿತಿ । ಸರ್ವಾರ್ಥ-
ಬೋಧನೇನ ಸರ್ವಫಲಪ್ರದತ್ವಾದೀಶ್ವರೀ ತಾದೃಶೀ ಯಾ
ವಾಕ್ ಶಿಲ್ಪವೇದ ಇತ್ಯರ್ಥಃ। ಮೇರ್ವಾದೀನಿ ಶಂಕು-

---

ಶಸ್ತ್ರ, ಅಸ್ತ್ರ, ಯಂತ್ರ, ಹಲ, (ನೇಗಲು) ಪ್ರಾಸಾದ (ಶ್ರೀಮಂತ ರಾದವರು ವಾಸಮಾಡುವ ಮಹಡಿಮನೆ. ರಾಜರು ವಾಸಮಾಡುವ ಅರಮನೆ ಇವುಗಳು.) ವಾಪಿ (ಭಾವಿ) ಆಭರಣ (ಒಡವೆಗಳು) ಇವೇ ಮೊದಲಾದವುಗಳನ್ನು ನಿರ್ಮಾಣಮಾಡುವುದು ಮಾನುಷಶಿಲ್ಪವೆನಿಸಿರು ವುದು.

ಈ ಪ್ರಕಾರವಾಗಿ ಎರಡುವಿಧವಾದ ಶಿಲ್ಪಗಳಿಗೂ ಆಯಾಯ ಗೃಹಾದಿಗಳ ನಿರ್ಮಾಣಕಾಲದಲ್ಲಿ ಅತ್ಯವಶ್ಯಕವಾಗಿರುವ ಸಾಧನಗಳನ್ನು ಶಿಲ್ಪವೇದವು ಬೋಧಿಸಿರುತ್ತದೆ. ಎಲ್ಲಾವಿಧವಾದ ಅರ್ಥವನ್ನೂ ಬೋಧಿಸುವುದರಿಂದ ಸರ್ವಫಲಪ್ರದವಾದ (ಈಶ್ವರ) ಮಹಾಮಹಿಮೆ ಯುಳ್ಳ ಶಿಲ್ಪವೇದವು ಮೇರುವೇ ಮೊದಲಾದ ಶಂಕು, ದಂಡಾದಿಗಳು,

ಕರಣಾನಿ । ಏಭ್ಯೋ ದಶಭ್ಯ ಏವ ಕ್ರಿಯತೇ
ಸರ್ವಂ ವೈ ಚಿತ್ರಗ್ಂ ಶಿಲ್ಪಂ । ಅತಃ ಶಿಲ್ಪ-

---

ದಂಡಾದೀನಿ । ಡುಮಿಞ್ ಪ್ರಕ್ಷೇಪಣೇ ಇತಿ ಧಾತೋಃ
ರುಪ್ರತ್ಯಯೇ ಕರ್ಮಾರ್ಥೇ ಸತಿ ಗುಣೇನ ಮೇರುಶಬ್ದ-
ನಿಷ್ಪತ್ತೇಃ । ಪ್ರಕ್ಷಿಪ್ಯಮಾಣ ಇತ್ಯರ್ಥಃ । ಶಂಕುದಂಡಂ
ವಾ ಪ್ರಕ್ಷಿಪ್ಯಮಾನೇ ಯತ್ನಾ ನಿಷ್ಕರ್ಷಪೂರ್ವಕಮಾಲಯ-
ನಿರ್ಮಾಣಾತ್ ದಂಡಾದೇರುಪಕರಣತ್ವಂ ಕರ್ತವ್ಯಾರ್ಥ-
ಜ್ಞಾಪಕತ್ವಾಚ್ಚ ವೇದಶಿಲ್ಪಸ್ಯೋಪಕರಣತ್ವಮುವಧೇಯಂ ।

---

ಶಿಲ್ಪಸಾಧನಗಳೆಂದು ಬೋಧಿಸುತ್ತದೆ. ಡುಮಿಞ್ ಪ್ರಕ್ಷೇಪಣೇ ಎಂಬ
ಧಾತುವಿಗೆ ಕರ್ಮಾರ್ಥದಲ್ಲಿರುವ ಪ್ರತ್ಯಯವು ಬಂದು, ಗುಣವೂ (ಏಕಾ
ರವು) ಬಂದು ಇರುವುದರಿಂದ ಮೇರು ಎಂದು ಶಬ್ದರೂಪವು ಸಿದ್ಧವಾಗಿ
ರುತ್ತದೆ. ಮೇರು ಶಬ್ದಕ್ಕೆ "ಪ್ರಕ್ಷಿಪ್ಯಮಾಣ" ಎಂದು ಅರ್ಥವಾಗುತ್ತದೆ.
ಶಂಕುವನ್ನೂ ದಂಡವನ್ನೂ ಆಯಾಯ ಪ್ರಮಾಣನಿಷ್ಕರ್ಷೆಗಾಗಿ ಇರಿ
ಸುವುದು ಮತ್ತು ಅನಂತರದಲ್ಲಿ ಆಯಾಯ ಗೃಹವೇ ಮೊದಲಾದವು
ಗಳನ್ನು ನಿರ್ಮಿಸುವುದು, ಇವುಗಳಿಂದ ಶಂಕು, ದಂಡಾದಿಗಳು ಉಪ
ಕರಣ (ಸಾಧನ) ಗಳೆಂದು ತಿಳಿದುಬರುವುದು. ಕರ್ತವ್ಯಾರ್ಥಜ್ಞಾಪಕ
ವಾಗಿರುವ ಕಾರಣ ವೇದಶಿಲ್ಪವೂ ಕೂಡ ಉಪಕರಣವಾಗಿರುವುದು
ಎಂದು ತಿಳಿಯಬೇಕು. ಪೂಜ್ಯನಾದ (ವಿಶ್ವಕರ್ಮದೇವನ) ಸಾಂಬ

ಮೂಲಾನಿ ಸರ್ವಾಣಿ । ಪೂಜನೀಯಾನಿ ಸರ್ವೇಷಾಮತೋ ಭವಂತಿ ಶಿಲ್ಪಾನಿ। ಏಭಿಃ ಸುಖಂ ಜೀವೇಯುರ್ಲೋಕಾಃ । ಏಭಿ-

ಭಗವತ್ತೇಜೋಂಶಸಂಭೂತೈಃ ಪಂಚಭಿಃ ಪುರುಷೈಃ ಸೃಷ್ಟಿ ಸ್ಥಿತಿಸಂಹಾರತಿರೋಧಾನಾನುಗ್ರಹರೂಪಪಂಚಕೃತ್ಯೈಶ್ಚ ಸರ್ವಜಗಚ್ಛಿಲ್ಪಮುಕ್ತಮುಪಸಂಹರತಿ । ಏಭ್ಯ ಇತಿ । ಆದರಾರ್ಥಮುಕ್ತಮೇವ ಶಿಲ್ಪಸ್ಯ ಪೂಜ್ಯತ್ವಂ ಸರ್ವವ್ಯಾಪ-

ಮೂರ್ತಿಯ ತೇಜಸ್ಸಿನ ಅಂಶದಿಂದ ಅವತರಿಸಿರುವ (ಐದು ಜನಗಳಾದ) ಪಂಚಪುರುಷರು ಆಚರಿಸುತ್ತಾ ಇರುವ (ಪಂಚಕೃತ್ಯಗಳಿಂದಲೇ) ಸೃಷ್ಟಿ ಸ್ಥಿತಿ, ಲಯ, ತಿರೋಧಾನ, ಅನುಗ್ರಹ ಎಂಬ ಪಂಚಕೃತ್ಯಗಳಿಂದಲೇ ಸಕಲವಾದ ಜಗಚ್ಛಿಲ್ಪವು ಉಂಟಾಗಿರುವುದು ಎಂದು ಹೇಳಲ್ಪಟ್ಟಿರುತ್ತದೆ. ಈ ಅಂಶವನ್ನು ಈ ಗ್ರಂಥದಲ್ಲಿ ಉಪಸಂಹಾರಮಾಡುವುದಕ್ಕಾಗಿ ಏಭ್ಯಃ ದಶಭ್ಯ ಏವ ಕ್ರಿಯತೇ ಎಂದು ಸೂತ್ರವು ಪ್ರವೃತ್ತವಾಗಿರುತ್ತದೆ. ಸರ್ವರಿಗೂ ಆದರದಿಂದ ಉಪಾದೇಯವಾಗಿರುವ ಕಾರಣ ಶಿಲ್ಪವು ಪೂಜ್ಯವಾಗಿರುವುದು ಎಂದು ಹೇಳಲ್ಪಟ್ಟಿರುವುದು. ಈ ಪ್ರಕಾರವಾಗಿರುವ ಶಿಲ್ಪವು ಪಂಚಪುರುಷರು ಆಚರಿಸುವ ಪಂಚಕೃತ್ಯಗಳೆಂಬ ದಶಸಂಖ್ಯಾಕವಾದ ಸಮುದಾಯದಿಂದ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುತ್ತದೆ. ಶಿಲ್ಪವು ಎಂಬುವುದು ಎಲ್ಲವೂ ಸರ್ವವ್ಯಾಪಕವಾಗಿರುವ ಕಾರಣದಿಂದಲೇ

ರಾಪ್ನುಯಾನ್ನಿಃಶ್ರೇಯಸಂ । ಏಭಿರ್ಭವಂನ್ತಿ
ಜಗಂತಿ ಚಕ್ಷುಷ್ಮಂತಿ। ಏಭಿಃ ಪೂಜ್ಯನ್ತೇಽತ್ರ

---

**ಕತ್ವಹೇತುವಾದೇನಾಹ । ಅತಃ ಶಿಲ್ಪಮೂಲಾನೀತಿ ।
ಸ್ಪಷ್ಟೋಽಕ್ಷರಾರ್ಥಃ । ಸರ್ವಫಲಜನಕತ್ವಂ ಮೋಕ್ಷಸಾಧ-**

---

(ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಕಾರಣ) ವಿಚಿತ್ರವಾಗಿರುವುದು (ಅನೇಕವಿಧವಾಗಿರುವುದು.) ಈ ಕಾರಣದಿಂದಲೇ ಎಲ್ಲವೂ ಶಿಲ್ಪವನ್ನೇ ಮೂಲ (ಕಾರಣ) ವನ್ನಾಗಿ ಹೊಂದಿರುವುವು ಮತ್ತು ಶಿಲ್ಪವೆಂಬುವು ದೆಲ್ಲವೂ ಎಲ್ಲರಿಗೂ ಪೂಜ್ಯವಾಗಿರುತ್ತದೆ.

ಶಾಸ್ತ್ರದ ಪ್ರತಿಪಾದ್ಯವನ್ನೂ ಶಾಸ್ತ್ರಾಂತರದಲ್ಲಿ ಹೇಳುವ ಸಿದ್ಧಾಂತ ನಿರಾಸಪೂರ್ವಕವಾಗಿ ಪ್ರಕೃತಸಿದ್ಧಾಂತವನ್ನೂ ವಿವರವಾಗಿ ಹೇಳಿದ ನಂತರ ಫಲವನ್ನು ಹೇಳುವುದು ಪ್ರತಿಯೊಂದು ಶಾಸ್ತ್ರದಲ್ಲಿಯೂ ಇರುವ ಸಂಪ್ರದಾಯವು. ಇದನ್ನು ಅನುಸರಿಸಿ ಈ ಶಿಲ್ಪಶಾಸ್ತ್ರದ ಸ್ವರೂಪವನ್ನೂ ಶಾಸ್ತ್ರಪ್ರತಿಪಾದ್ಯವನ್ನೂ ವಿವರಿಸಿ ಇನ್ನು ಮುಂದೆ ಈ ಶಾಸ್ತ್ರದ ಅಭ್ಯಾಸದಿಂದ ಉಂಟಾಗುವ ಫಲವನ್ನು ವಿವರ ವಾಗಿ ತಿಳಿಸಲಾಗುವುದು.

"ಎಭಿಃ ಸುಖಂ ಜೀವೇಯುರ್ಲೋಕಾಃ" ಎಂಬುವ ಸೂತ್ರ ಮೊದಲುಮಾಡಿ "ಏಭಿಃ ಮುಮುಕ್ಷವಃ ಪ್ರಾಪ್ನುವಂತಿ ಮೋಕ್ಷಂ" ಎಂಬುವ ಸೂತ್ರದ ಕೊನೆಯವರೆಗೂ ಫಲವನ್ನು ಬೋಧಿಸುವ ಶ್ರುತಿ

ವೇಧಸಃ ಸ್ಥಪತಯಶ್ಚ । ಏಭಿಃ ಪ್ರೋರ್ಣ್ಣಂ

ನತ್ವಂ ಚಾಹ । ಏಭಿಃ ಸುಖಮಿತಿ । ಜ್ಞಾನಸಾಧನತಾಮಾಹ ।
ಏಭಿಶ್ಚಕ್ಷುಷ್ಮಂತೀತಿ । ಈದೃಶಜ್ಞಾನಾದಿಸರ್ವಫಲಪ್ರದಾ-
ತೃತ್ವಹೇತುಕಂ ಭಗವತ್ತೇಜೋಂಶಸಂಭೂತಪಂಚಪುರು-
ಷಾಣಾಂ ತಾನನುಸರತಾಂ ಸ್ಥಪತೀನಾಂ ಚ ಪ್ರೂಜ್ಯತಾ-

ಗಳು ಹರಿತವಾಗಿರುತ್ತವೆ. ಇದರಿಂದ ಶಿಲ್ಪವು ಸರ್ವವಿಧವಾದ ಫಲ
ವನ್ನು ಉಂಟುಮಾಡುವುದಲ್ಲದೆ ಮೋಕ್ಷಸಾಧನವೂ ಆಗಿರುತ್ತದೆ.
ಶಿಲ್ಪವೇದಪ್ರತಿಪಾದ್ಯವಾದ ದೇವಾಲಯನಿರ್ಮಾಣಾದಿಗಳಿಂದಲೂ ಜನ
ಗಳು ಎಲ್ಲರೂ ಸುಖವನ್ನು ಹೊಂದುವರು. ಆಯಾಯ ದೇವತಾ
ಉಪಾಸಕರು ಆಯಾಯ ಮಂತ್ರಪ್ರತಿಪಾದ್ಯವಾದ ಲಕ್ಷಣಾದಿಗಳಿಗೆ
ಅನುಗುಣವಾದ ಶಿಲ್ಪಕ್ರಮದಿಂದ ನಿರ್ಮಿತವಾದ ದೇವತಾರೂಪ
ಧ್ಯಾನಾದಿಗಳಿಂದ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಹೊಂದುವುದರಿಂದ
ಶಿಲ್ಪವು ಮೋಕ್ಷಸಾಧನವೂ ಆಗಿರುತ್ತದೆ. ಈ ಅಭಿಪ್ರಾಯದಿಂದಲೇ
"ಏಭಿರಾಪ್ನುಯಾನ್ನಿಶ್ಶ್ರೇಯಸಂ" ಎಂದು ಸೂತ್ರವು ಪ್ರವೃತ್ತವಾಗಿರು
ತ್ತದೆ. "ಏಭಿರ್ಭವಂತಿ ಜಗಂತಿ ಚಕ್ಷುಷ್ಮಂತಿ" ಎಂಬ ಸೂತ್ರದಿಂದ
ದೇವತಾರಾಧನೆ ಮೂಲಕವಾಗಿ ಜ್ಞಾನಪ್ರಾಪ್ತಿಯು ಆಗುವುದೆಂದು
ಬೋಧಿಸುವಕಾರಣ ಶಿಲ್ಪವು ಜ್ಞಾನಸಾಧನವಾಗಿರುತ್ತದೆ.

ಜ್ಞಾನವೇ ಮೊದಲಾದ ಸರ್ವಫಲವನ್ನು ಉಂಟುಮಾಡಲು
ಕಾರಣವಾದ ಶಿಲ್ಪಜ್ಞಾನವನ್ನು ಬೋಧಿಸುವ ಪಂಚಪುರುಷರು

**ಭವತ್ಯಾನಂದಂ ಚ । ಏಭಿರ್ಮುನಿಮುಖ್ಯವಃ**

**ಮಾಹ । ಏಭಿರಿತಿ । ಕೇ ಪುನಃ ಸ್ಥಪತಿರಿತಿ । ಬಹುಗುಣಃ । ಕೇ ತೇ ಗುಣಾಃ? ತಾನನುಶಿಂಷ್ಟಃ । ಸರ್ವಶಾಸ್ತ್ರಸಂವಿತ್, ನ್ಯೂನಾತಿರಿಕ್ತಾಂಗಹಾನಿಃ, ಧರ್ಮರತಿಃ ದಯಾ ಮಾತ್ಸ-ರ್ಯ್ಯಾಸೂಯಾಭಾವಃ ತಂತ್ರನಿತ್ತಿಃ ಸತ್ಕುಲಪ್ರಸೂತಿಃ ಗಣಿತ-**

ಭಗವತ್ತೇಜಸ್ಸಿನ ಅಂಶದಿಂದ ಅವತಾರವಮಾಡಿರುವರು. ಗುರುಗಳಾದ ಮತ್ತು ಲೋಕಪೂಜ್ಯರಾದ ಈ ಪಂಚಪುರುಷರನ್ನು ಅನುಸರಿಸಿರುವ ಸ್ಥಪತಿಗಳೂ ಕೂಡ ಪೂಜಾದಿಗಳಿಗೆ ಅರ್ಹರಾಗಿ ಪೂಜಿಸಲ್ಪಡುವರು ಎಂದು "ಏಭಿಃ ಪೂಜ್ಯಂತೆ ಅತ್ರ ಸ್ಥಪತಯಃ" ಎಂಬ ಸೂತ್ರವು ಬೋಧಿಸುವುದು ಸ್ಥಪತಿ ಎಂದು ಪ್ರಸಿದ್ಧಿಯನ್ನು ಹೊಂದಲು ಮುಂದೆ ವಿವರಿಸುವ ಗುಣಗಳು ಅವರಲ್ಲಿ ಇರಬೇಕು ಎಂದು ಆ ಗುಣಗಳನ್ನು ವಿವರಿಸಿರುತ್ತದೆ. ಸ್ಥಪತಿಗಳಿಗೆ ಎಲ್ಲಾ ಶಾಸ್ತ್ರಗಳ ಜ್ಞಾನವೂ ಇರಬೇಕು. ಸ್ಥಪತಿಗಳಿಗೆ ಸಾಮುದ್ರಿಕಶಾಸ್ತ್ರದಲ್ಲಿ ಉಕ್ತವಾಗಿರುವಪ್ರಕಾರ ಶರೀರದಲ್ಲಿ ಅಂಗಗಳು ಸರಿಯಾದ ಪ್ರಮಾಣದಲ್ಲಿ ಅಂದರೆ ನ್ಯೂನಾತಿರಿಕ್ತಭಾವವಿಲ್ಲದಿರುವಂತೆ ಇರಬೇಕು. ಧರ್ಮವನ್ನು ಆಚರಿಸುವುದರಲ್ಲಿ ಆಸಕ್ತಿಯು ಇರಬೇಕು. ಪ್ರಾಣಿಗಳ ವಿಷಯದಲ್ಲಿ ದಯೆಯು ಇರಬೇಕು. ಯಾವನಲ್ಲಿಯಾದರೂ ಬಹಳದಿನದವರಿಗೂ ಸ್ಥಿರವಾದ ದ್ವೇಷವೂ ಅಸೂಯೆಯೂ ಇರಬಾರದು. ಆಯಾಯ ಶಿಲ್ಪಜ್ಞಾನಕ್ಕನುಕೂಲವಾಗಿ ತಂತ್ರಗಳ ಜ್ಞಾನವೂ ಆವಶ್ಯಕವಾಗಿರಬೇಕು. ಸದ್ವಂಶದಲ್ಲಿ ಹುಟ್ಟಿದವರಾಗಿರಬೇಕು. ಗಣಿತಶಾಸ್ತ್ರ, ಜ್ಞಾನ, ಪುರಾಣಗಳಲ್ಲಿ

**ಪುರಾಣಚಿತ್ರಸರ್ವದೇಶಜ್ಞಾನಂ ಸತ್ಯಮಿಂದ್ರಿಯಜಯಃ**
**ರೋಷಪ್ರಮಾದಾಭಾವಃ ಸೌಮನಸ್ಯಂ ವಾಸ್ತುವಿದ್ಯಸಂ -**

ಹೇಳಿರುವ ಲೋಕಶಾಸ್ತ್ರಗಳ ರಹಸ್ಯಜ್ಞಾನ, ಚಿತ್ರಗಳನ್ನು ಬರೆಯುವುದರಲ್ಲಿ ನಿಪುಣತೆ, ಎಲ್ಲಾ ದೇಶಗಳು ಮತ್ತು ಆಚಾರಗಳು ಇವುಗಳ ಜ್ಞಾನವು ಇರುವುದು ಗುಣವೆನಿಸಿರುತ್ತದೆ ಮತ್ತು ಸ್ಥಪತಿಗಳು ಸತ್ಯವನ್ನೇ ಹೇಳುವವರಾಗಿಯೂ ಇಂದ್ರಿಯಗಳ ನಿಗ್ರಹವುಳ್ಳವರಾಗಿಯೂ ಇರಬೇಕು. ದೋಷಸ್ವಭಾವವುಳ್ಳವರಾಗಿ ಇರಬಾರದು. ಕಾರ್ಯಗಳನ್ನು ಮಾಡುವಾಗ ತಪ್ಪುಮಾಡುವ ಸ್ವಭಾವವನ್ನು ಹೊಂದಿರಬಾರದು. ಇತರರಿಗೆ ಹಿತವನ್ನು ಮಾಡುವ, ಮೃದುವಾದ ಮಾತುಗಳನ್ನಾಡುವ, ಶುದ್ಧವಾದ ಮನಸ್ಸುಳ್ಳವರಾಗಿರಬೇಕು ಮತ್ತು ವಾಸ್ತುವಿದ್ಯಾಜ್ಞಾನವನ್ನು ಹೊಂದಿರಬೇಕು ಎಂಬ ಈ ಎಲ್ಲಾ ವಿಧವಾದ ಗುಣಗಳೂ ಸ್ಥಪತಿಗಳಿಗೆ ಇರಬೇಕಾದದ್ದು ಅವಶ್ಯಕವಾಗಿರುತ್ತದೆ.

ಶಿಲ್ಪವೇದಜ್ಞಾನವುಳ್ಳವರಾದ ಈ ಪ್ರಕಾರವಾದ ಗುಣಗಳುಳ್ಳ ಸ್ಥಪತಿಗಳಿಂದ ಸಂಪೂರ್ಣವಾದ ಸಂತೋಷವುಂಟಾಗುವುದು. ಆನಂದಂ ಎಂಬ ಶಬ್ದವು ನಪುಂಸಕಲಿಂಗವಾಗಿ ಉಪಯೋಗಿಸಲ್ಪಟ್ಟಿರುತ್ತದೆ. ಈ ಪ್ರಯೋಗವು ವೈದಿಕವಾಗಿರುವುದು ವೇದಮಾತ್ರದಲ್ಲಿ ಕಂಡುಬರುವುದಾಗಿರುತ್ತದೆ. ಮೋಕ್ಷವನ್ನು ಹೊಂದಲು ಇಚ್ಛೆಯುಳ್ಳವರು ಈ ಸ್ಥಪತಿಗಳಿಂದ ಮೋಕ್ಷವನ್ನು ಹೊಂದುವರು. ಶಾಸ್ತ್ರಪ್ರತಿಪಾದ್ಯವೆಲ್ಲವೂ

ಪ್ರಾಪ್ನುವಂತಿ ಮೋಕ್ಷಂ । ಇತ್ಯೇವಂ ಭವತಿ
ಶಿಲ್ಪಂ । ಶಿಲ್ಪಗ್ಂ ಹ್ಯಾಸ್ಮಿನ್ನಧಿಗಮ್ಯತೇ ।
ತಸ್ಮಾಜ್ಜಗತ್ಸರ್ಜನಂ ಭವತಿ ಶಿಲ್ಪಂ ।

ವಿಚೇಷ್ಟೇತಿ । ಆನಂದಮಿತಿ ಛಾಂದಸೀ ಕ್ಲೀಬತಾ । ಇತ್ಯೇವಂ ಭಗವತಿ ಶಿಲ್ಪಮಿತಿ।ಸರ್ವೋಪಸಂಹಾರಃ।ನ ಕೇವಲಮುಕ್ತ-ಪೂರ್ವದೇವಾಲಯನಿರ್ಮಾಣಾದೀನ್ಯೇವ ಶಿಲ್ಪಾನಿ ಕಿಂತು ಚೇಷ್ಟಾಮಾತ್ರಮಪಿ ಶಿಲ್ಪಮೇವೇತ್ಯಾಹ। ಶಿಲ್ಪಂ ಹ್ಯಾಸ್ಮಿನ್ನಧಿ ಗಮ್ಯತ ಇತಿ। ಅಯಮಭಿಸಂಧಿಃ। ಅಸ್ಮಿನ್ನಿತಿ ಸರ್ವನಾಮ-ಶಬ್ದ ಉಪಸ್ಥಿತಾರ್ಥವಾಚೀ। ಪ್ರತ್ಯಕ್ಷಾದ್ಯುಪಸ್ಥಿತೇಃ ಸಂಕೋ-ಚಕಾಭಾವಾತ್ಸರ್ವತ್ರೇತಿ ಅರ್ಥಃ ಸಿಧ್ಯತಿ । ಅತಃ ಸರ್ವತ್ರ

ಉಕ್ತವಾಗಿರುವುದನ್ನು ಬೋಧಿಸುವುದಕ್ಕಾಗಿ ಇತ್ಯೇವಂಭವತಿ ಶಿಲ್ಪಂ ಎಂಬಸೂತ್ರದಿಂದ ಉಪಸಂಹಾರವನ್ನು ನಿರ್ದೇಶಮಾಡಿರುವುದು.

"ಶಿಲ್ಪಗ್ಂಹ್ಯಾಸ್ಮಿನ್ನಧಿಗಮ್ಯತೆ" ಎಂಬಸೂತ್ರದಿಂದ ಹಿಂದೆ ಹೇಳಿರುವ ದೇವಾಲಯ ನಿರ್ಮಾಣವೇ ಮೊದಲಾದುವುಗಳು ಶಿಲ್ಪವೆನಿಸುವಹಾಗೆಯೇ ಚೇಷ್ಟಾಮಾತ್ರವೂಕೂಡ ಶಿಲ್ಪವಾಗಿರುವುದು ಎಂದು ಬೋಧಿಸುವುದು. "ಅಸ್ಮಿನ್" ಎಂಬಸರ್ವನಾಮಶಬ್ದವು ಉಪಸ್ಥಿತಾರ್ಥ ವಾಚಿಯಾಗಿರುವುದು. ಪ್ರತ್ಯಕ್ಷಾದಿ ಉಪಸ್ಥಿತಿಯಲ್ಲಿ ಸಂಕೋಚವು ಯಾವುದೂ ಇಲ್ಲದಿರುವುದರಿಂದ ಸರ್ವತ್ರ ಎಂಬ ಅರ್ಥವು ಗಮ್ಯವಾಗು

**ಶಿಲ್ಪಮಿತಿ। ನ ಚ ವಾಚ್ಯಂ ನ ಪಶ್ಯಾಮಃ ತಾನ್ ಯೇ ಚೇಷ್ಟಾಸಾಮಾನ್ಯೇ ಶಿಲ್ಪಶಬ್ದಂ ಪ್ರಯುಂಜತ ಇತಿ। ತತಶ್ಚ ವೃದ್ಧಪ್ರಯೋಗರೂಪಗುಣವಿಗಮಾತ್ಸರ್ವಸ್ಯ ಶಿಲ್ಪಶಬ್ದ-ವಾಚ್ಯತ್ವಾಸಿದ್ಧಿರಿತಿ। ವಿಗುಣಾದಸಿದ್ಧಿರಿತಿ ಚೇನ್ನ। ಕಿಂ**

ತ್ತದೆ. ಈ ಕಾರಣದಿಂದ ಸರ್ವತ್ರ ಶಿಲ್ಪಂ ಎಂದೇ ಅರ್ಥವು ಆಗುತ್ತದೆ. ಸಂಯೋಗಾದಿಗಳಿಂದ ಅನೇಕಾರ್ಥಕ ಶಬ್ದಗಳ ವಾಚಕತ್ವವು ವಿವಕ್ಷಿತಾರ್ಥವಿಷಯವನ್ನು ಬೋಧಿಸುವುದರಲ್ಲಿ ಶಬ್ದಶಕ್ತಿಯು ಸಂಕುಚಿತವಾಗುವುದು ಶಾಸ್ತ್ರಸಿದ್ಧವೋಕ್ತವಾಗಿರುತ್ತದೆ. ಪ್ರಕೃತದಲ್ಲಿ ಅಸ್ಮಿನ್ ಎಂಬ ಶಬ್ದವೂ ಸರ್ವನಾಮವಾಗಿರುವ ಕಾರಣ ವಾಚಕತ್ವವು ಸಂಕುಚಿತವಾಗದೆ ಶಬ್ದಶಕ್ತಿಯಿಂದ ಗಮ್ಯವಾಗುವ ಅರ್ಥವೆಲ್ಲವೂ ಈ ಶಬ್ದದಿಂದಲೇ ಉಪಸ್ಥಿತವಾಗುವ ಕಾರಣ ಅಸ್ಮಿನ್ ಎಂಬ ಶಬ್ದಕ್ಕೆ ಸರ್ವತ್ರ ಎಂದು ಅರ್ಥವು ಆಗುತ್ತದೆ. ಇದರಿಂದ ಎಲ್ಲಾ ಕಡೆಯಲ್ಲಿಯೂ, ಎಲ್ಲಾ ವಿಧದಲ್ಲಿಯೂ ಶಿಲ್ಪವೇ ಇರುವುದು ಎಂದು ಅರ್ಥವಾಗುವುದರಿಂದ ಚೇಷ್ಟಾಸಾಮಾನ್ಯವೂ ಕೂಡ ಶಿಲ್ಪವೆಂದೇ ತಿಳಿಯತಕ್ಕದ್ದಾಗಿದೆ.

ಶಬ್ದಗಳೆಲ್ಲಕ್ಕೂ ಇರುವಂತೆ ಆಯಾಯ ಅರ್ಥೋಪಸ್ಥಿತಿಗೆ ಕಾರಣವಾದ ಶಕ್ತಿಗ್ರಹವು ವೃದ್ಧಪ್ರಯೋಗಾದಿಗಳ ಮೂಲಕ ಇರಬೇಕಾಗಿರುವ ಕಾರಣ ಶಿಲ್ಪಶಬ್ದವು ವೃದ್ಧರಿಂದ ಚೇಷ್ಟಾಸಾಮಾನ್ಯವಾಚಿಯಾಗಲು ಅವಕಾಶವಿಲ್ಲವೆಂದು ಶಿಲ್ಪಶಬ್ದವಾಚ್ಯತ್ವವು ಅಸಿದ್ಧವಾಗುವುದರಿಂದ ಸರ್ವತ್ರ ಚೇಷ್ಟಾಸಾಮಾನ್ಯವೂ ಶಿಲ್ಪವಾಗಿರುವದಿಲ್ಲವೆಂಬ (ಆಶಂಕೆಯು) ಆಕ್ಷೇಪವು ಉಂಟಾಗುವುದು. ಯೋಗಾನುಗತಿರೂಪ

ಕಾರಣಂ? ಯೋಗಾನುಗತೇಃ । ಕವಿಪ್ರಯೋಗರೂಪೋ-
ಪಾಯಾವಗತೇಃ । ಮೃಗಾಕ್ಷ್ಯಾಸ್ತಾರುಣ್ಯೇ ಕುಸುಮಶರ-
ಶಿಲ್ಪಂ ವಿಜಯತೇ ಇತ್ಯೇವಂ ಪ್ರಯುಂಜತೇ ಕವಯಃ ।
ನೈವೈಷಾ ಮೃಗಾಕ್ಷೀ ತರುಣೀ ಮಾನದಂಡವಾಸ್ಯಾದಿಕ-
ಮಾದದಾನಾ ದೇವಾಲಯಾದಿ ನಿರ್ಮಿತ್ಸನೇ, ಯತ್ಕಾರಣಂ
ಚ ಕುಸುಮಶರಸಂಬಂಧಃ ಶಿಲ್ಪಮುಪಬಧ್ನಾತಿ । ನಾತ

---

ವಾದ ಕಾರಣದಿಂದ ಈ ವಿಧವಾದ ಆಕ್ಷೇಪವು ಉಂಟಾಗಲು ಅವಕಾಶ ವಿರುವುದಿಲ್ಲ. ಯೋಗಾನುಗತಿಯೆಂಬುವುದು ಕವಿಪ್ರಯೋಗರೂಪ ವಾದ ಕಾರಣವಾಗಿರುತ್ತದೆ. ಶಿಲ್ಪಶಬ್ದವನ್ನು ಚೇಷ್ಟಾಸಾಮಾನ್ಯ ವಾಚಕವಾಗಿ ಕವಿಗಳು ಪ್ರಯೋಗಿಸಿರುವರು. "ಮೃಗಾಕ್ಷ್ಯಾಃ ತಾರುಣ್ಯೇ ಕುಸುಮಶರಶಿಲ್ಪಂ ವಿಜಯತೆ" ಎಂದು ಕವಿಪ್ರಯೋಗವು ಇರುತ್ತದೆ. ಸುಂದರಿಯಾದ ಕಾಮಿನಿಯ ಯೌವನದಲ್ಲಿ ಮನ್ಮಥನ ಬಾಣಚಮತ್ಕಾರವು ಜಯಪ್ರದವಾಗಿರುತ್ತದೆ ಮತ್ತು ಎಲ್ಲವನ್ನೂ ಮೀರಿ ಅತಿಶಯವಾಗಿರುತ್ತದೆ ಎಂದು ವಾಕ್ಯದ ಅಭಿಪ್ರಾಯವು. ಕಾಮಿನಿಯು ತನ್ನ ಯೌವ್ವನದಲ್ಲಿ ಮನ್ಮಥಾವಿಷ್ಟಳಾಗಿ ಕಾಮಸಂಬಂಧವಾದ ಚೇಷ್ಟೆಗಳನ್ನು ಆಚರಿಸುವಳು. ಈ ಚೇಷ್ಟಾಚರಣೆಯು ಮನ್ಮಥವಿಕಾರದಿಂದ ಉಂಟಾಗಿರುತ್ತದೆ. ಈ ಕಾರಣದಿಂದ ಕವಿಯು ಶಿಲ್ಪಶಬ್ದವನ್ನು ಚೇಷ್ಟಾವಾಚಿಯಾಗಿ ಉಪಯೋಗಿಸಿರುವನು. ತರುಣಿಯು ಮಾನ ದಂಡಾದಿಗಳನ್ನು ತೆಗೆದುಕೊಂಡು ದೇವಾಲಯಾದಿಗಳನ್ನು ನಿರ್ಮಾಣಮಾಡಲು ಆವಳಿಗೆ ಉಂಟಾಗಿರುವ ಕುಸುಮಶರಸಂಬಂಧವು ಶಿಲ್ಪಸಾಧನ

ವಿಷಾಲಯ ನಿರ್ಮಿತ್ಸಾ ಗಂಧೇನಾಪ್ಯಾಘ್ರಾತುಮರ್ಹತಿ ।
ಅಪಿ ತು ಪಿಶಾಚಾವಿಷ್ಟಾ ಚೇಷ್ಟಂ ಚೇಷ್ಟೇತ್ಯೈವ ಚಿತ್ರಂ ತದ-
ತಃ ಚೇಷ್ಟಾಮಾತ್ರವಾಚಿಕಾಂ ಸಾಧ್ನುಮ ಇತಿ । ವಿಗುಣಾದ-
ಸಿದ್ಧಿರಿತಿ ಚೇನ್ನ ಯೋಗಾನುಗತೇಃ । ನನು ತರುಣೀ-
ಚೇಷ್ಟಾಸು ಕಿಂ ರೂಢಮಿದಂ ಪದಂ? ಓಮಿತ್ಯುರರೀ-
ಕುರ್ವತೋಽನ್ಯತ್ರಾಪ್ರಯೋಗರೂಪರೂಪವೈಗುಣ್ಯಾಪತ್ತಿ-
ರಿತಿ ಚೇನ್ನ ಯೋಗಾನುಗತೇಃ। ಸಾಧನಾರ್ಥಃ ಪಪ್ರತ್ಯಯಃ

---

ವಾಗುವುದಿಲ್ಲ. ಇದರಿಂದ ಆಲಯನಿರ್ಮಾಣಾದಿಗಳು ತರುಣೀಕೃತಿ ವಿಷಯವಾಗಿರುವುದಿಲ್ಲ. ಆದರೆ ತರುಣಿಯು ಕಾಮಚೇಷ್ಟೆಗಳನ್ನು ಆಚರಿಸುವುದುಮಾತ್ರ ಇರುತ್ತದೆ. ಶಿಲ್ಪಶಬ್ದವನ್ನು ಕವಿಯು ಇಲ್ಲಿ ಪ್ರಯೋಗಮಾಡಿರುವುದರಿಂದ ಶಿಲ್ಪಶಬ್ದವು ಚೇಷ್ಟಾಸಾಮಾನ್ಯವಾಚಿ ಯೆಂದು ಹೇಳಬೇಕು. ಇದರಂತೆಯೇ ಶಿಲ್ಪಶಬ್ದವು ಚೇಷ್ಟಾವಾಚಿ ಯಾಗಿರುವಂತೆ ಬೇರೆಯಕಡೆಯಲ್ಲಿ ಪ್ರಯೋಗವನ್ನು ಮಾಡಿಲ್ಲವೆಂದು ಹೇಳುವ ಕಾರಣ ತರುಣೀಚೇಷ್ಟಾದಿರೂಪವಾದ ಅರ್ಥವನ್ನು ಶಿಲ್ಪ ಶಬ್ದವು ಬೋಧಿಸುವುದರಲ್ಲಿ ರೂಢವೆಂದು ಹೇಳುವುದಕ್ಕಾಗುವುದಿಲ್ಲ ಎಂದು ಆಕ್ಷೇಪಬರಬಹುದು. ಆದರೆ ಶೀಲಧಾತುವಿನಮೇಲೆ ಸಾಧನ ವೆಂಬ ಅರ್ಥದಲ್ಲಿ ಪಪ್ರತ್ಯಯವು ಬಂದು ಶಿಲ್ಪವೆಂದು ಶಬ್ದರೂಪವು ಸಿದ್ಧವಾಗಿರುತ್ತದೆ. ಇದರಿಂದ ಶಿಲ್ಪಶಬ್ದವು ಜ್ಞಾನಸಾಧನವೆಂದು ಅರ್ಥವನ್ನು ಹೇಳುವುದು.

ಶಿಲ್ಪಶಬ್ದೇ ಇತ್ಯುಕ್ತಂ ತಸ್ಯ ಪ್ರಸ್ತುತತ್ವಂ । ಗಮಕತ್ವಮಭಿ-
ಪ್ರೇತ್ಯ ಸಾಧನಶಬ್ದಂ ಪ್ರಯುಂಜನಾಂಶ್ಚ ಪಶ್ಯಾಮಃ ।
ಧೂಮೋ ವಹ್ನಿಸಾಧನಮಿತಿ । ನ ಖಲು ಧೂಮೋ ವಹ್ನಿಂ
ಜನಯತಿ ವೈಪರೀತ್ಯಾವಗತೇಃ ವಹ್ನೇರ್ಧೂಮೋ ಜಾಯತ
ಇತಿ । ತದಿಹ ಧೂಮೋ ವಹ್ನಿಗಮಕ ಇತಿ ಸಿಧ್ಯತಿ । ತತಶ್ಚ
ಯ್ಯೈಷಾ ಕಟಾಕ್ಷಾದಿಚೇಷ್ಟಾಸಂತತಿಃ ಸಾ ಮನ್ಮಥಾವೇಶ-
ಗಮನೀ ಸಾಧನಾರ್ಥಯೋಗಾನುಗಮಾತ್ ನ ಪ್ರಯೋ-
ಗಾನುಪಪತ್ತಿರಿತಿ ವಿಗುಣಾದಸಿದ್ಧಿರಿತಿ ಚೇನ್ನ ಯೋಗಾನು-

---

ಸಾಧನಶಬ್ದವನ್ನು ಗಮಕ ಎಂಬ ಅರ್ಥದಲ್ಲಿ ಪ್ರಯೋಗಿಸಿ ರುವರು. ತರುಣಿಯ ಚೇಷ್ಟಾದಿಗಳು ಕಾಮನ ಚಾತುರ್ಯಗಮಕ ವೆಂದು ಅರ್ಥವಾಗುವುದು. ಗಮಕವೇ ಸಾಧನವು. ಧೂಮವು ವಹ್ನಿಸಾಧನ ಎಂದು ಹೇಳುವ ವಾಕ್ಯದಲ್ಲಿ “ ಧೂಮವು ಇರುವಲ್ಲಿ ವಹ್ನಿಯು ಇರುವುದು ” ಎಂದು ತಿಳಿಯಲು ವಹ್ನಿಜ್ಞಾನವುಂಟಾಗುವು ದಕ್ಕೆ ಧೂಮಜ್ಞಾನವು ಗಮಕವಾಗಿರುತ್ತದೆ. ಧೂಮವು ವಹ್ನಿಯನ್ನು ಉಂಟುಮಾಡುವುದಿಲ್ಲ ವಹ್ನಿಯಿಂದಲೇ ಧೂಮವು ಉಂಟಾಗುತ್ತದೆ. ಧೂಮವು ವಹ್ನಿಜ್ಞಾನಗಮಕವು. ಧೂಮಜ್ಞಾನವು ವಹ್ನಿಜ್ಞಾನಗಮಕವಾಗಿರುವಂತೆ ತರುಣೀಕೃತವಾದ ಕಟಾಕ್ಷಾದಿಗಳು ಮನ್ಮಥಾವೇಗಗಮಕಗಳಾಗಿರುತ್ತವೆ. ಸಾಧನಾರ್ಥವಾಚಿಯು ಗಮ ಕವೆಂದು ತಿಳಿಯಬೇಕು. ಕವಿಪ್ರಯೋಗದಲ್ಲಿ ಶಿಲ್ಪಶಬ್ದವು ಸಾಧ ನಾರ್ಥವಾಚಕವಾಗಿರುತ್ತದೆಯಾದಕಾರಣ ಪ್ರಯೋಗವು ಉಪಪನ್ನ ವಾಗುತ್ತದೆ.

**ಗತೇಃ, ನನು ತರುಣೀಚೇಷ್ಟಾಸು ಪ್ರಯೋಗಃ ತಚ್ಚೇಷ್ಟಾ-ವಾಚಕತ್ವಂ ಗಮಯೇತ್ ನ ಸರ್ವಕ್ರಿಯಾವಾಚಕತ್ವಮಿತಿ ಸರ್ವಕ್ರಿಯಾವಾಚಕತ್ವಸಾಧಕಗುಣಾಭಾವಾತ್ ನ ಸರ್ವ-ಕ್ರಿಯಾವಾಚಕತ್ವಸಿದ್ಧಿರಿತಿ ಚೇನ್ನ, ಯೋಗಾನುಗತೇಃ "ಜಪೋ ಜಲ್ಪಃ, ಶಿಲ್ಪಂ ಸಕಲಮಪಿ ಮುದ್ರಾವಿರಚನಂ" ಇತಿ ಕ್ರಿಯಾಸಾಮಾನ್ಯೇಽಪಿ ಶಿಲ್ಪಶಬ್ದಪ್ರಯೋಗದರ್ಶನೋ-ಪಾಯಾವಗಮಾತ್ ಇತ್ಯಪಿಸೂತ್ರಾರ್ಥಃ। ಏವಂ ಯೋಗ-**

---

ಕವಿಪ್ರಯೋಗದಿಂದ ಚೇಷ್ಟಾಮಾತ್ರವಾಚಕತ್ವವು ಸಿದ್ಧವಾಗುತ್ತದೆ. ಸರ್ವಕ್ರಿಯಾವಾಚಕತ್ವವು ಸಿದ್ಧವಾಗುವುದಿಲ್ಲ ಎಂದು ಹೇಳಬಾರದು. ಸರ್ವಕ್ರಿಯಾವಾಚಕತ್ವವೂಕೂಡ ಸಿದ್ಧವಾಗುವ "ಜಪೋ ಜಲ್ಪಃ ಶಿಲ್ಪಂ ಸಕಲಮಪಿ ಮುದ್ರಾವಿರಚನಂ" ಎಂದು ಪ್ರಯೋಗವು ಇರುವುದು. ಶಿಲ್ಪಶಬ್ದವು ಈ ಪ್ರಯೋಗದಿಂದ ಕ್ರಿಯಾಸಾಮಾನ್ಯವಾಚಿಯಾಗಿರುವಕಾರಣ ಚೇಷ್ಟಾಸಾಮಾನ್ಯವೂಕೂಡ ಶಿಲ್ಪವಾಗಿರುವುದೆಂದು ತಿಳಿಯತಕ್ಕದ್ದು. "ಶಿಲ್ಪಗ್ಂ ಹ್ಯಾಸ್ಮಿನ್ನಧಿಗಮ್ಯತೆ" ಎಂಬ ಸೂತ್ರಾರ್ಥವು ಹಿಂದೆ ಹೇಳಿದಂತೆಯೇ ಯುಕ್ತವಾಗಿರುವುದು.

ಶಿಲ್ಪಶಬ್ದಾರ್ಥವು ನಿಷ್ಕೃಷ್ಟವಾಗಿರುವ ಕ್ರಮವನ್ನು ಹಿಂದೆ ಹೇಳಿರುವುದು ಯೋಗಮಾತ್ರದಿಂದಲೇ. ಚೇಷ್ಟಾಮಾತ್ರವು ಶಿಲ್ಪವೆಂದು ಕವಿಪ್ರಯೋಗಕ್ಕೆ ಉಪಪತ್ತಿಯನ್ನು ಹೇಳಿರುವಾಗ ಯೋಗರೂಢವಾದ ಅರ್ಥದಿಂದ ಜಗತ್ಸರ್ಜನರೂಪಾರ್ಥದಲ್ಲಿ ಶಿಲ್ಪಶಬ್ದಪ್ರಯೋಗವು ಯುಕ್ತವಾಗಿಯೇ ಇರುತ್ತದೆ. ಈ ಪ್ರಕಾರವಾಗಿ ಅರ್ಥವನ್ನು ಹೇಳು

**ಯಜ್ಞೋ ಭವತು ವಿಜ್ಞಾನಂ ಚ ಶಿಲ್ಪಂ ।**
**ಲೌಕಿಕಂ ಭವತು ವೈದಿಕಂ ಚಾಪಿ ಶಿಲ್ಪಂ ।**

**ಮಾತ್ರಾತ್ಕಥಂಚಿದನ್ಯತ್ರ ಪ್ರಯೋಗೇ ಸಿದ್ಧೇ ಯೋಗರೂಢಂ ಜಗತ್ಸರ್ಜನೇ ಶಿಲ್ಪಮಿತಿ ನ ಕೋಽಪಿ ವಿರೋಧ ಇತ್ಯಾಹ । ತಸ್ಮಾದಿತಿ । ಯಜ್ಞೋ ಭವತ್ವಿತ್ಯಾದಿ....ವೈದಿಕಂ ಚಾಪಿ ಶಿಲ್ಪಮಿತ್ಯಂತಃ ವ್ಯಾಖ್ಯಾತಪೂರ್ವಃ । ಅಧಿಕಾರಿಣ-**

ವುದರಿಂದ ಯಾವವಿಧವಾದ ಶಾಸ್ತ್ರವಿರೋಧವೂ ಇರುವುದಿಲ್ಲ. ಈ ಕಾರಣದಿಂದಲೇ "ತಸ್ಮಾತ್ ಜಗತ್ಸರ್ಜನಂ ಶಿಲ್ಪಂ ಭವತಿ" ಎಂದು ಸೂತ್ರವು ಜಗತ್‌ಸೃಷ್ಟಿಯನ್ನು ಶಿಲ್ಪವೆಂದು ಬೋಧಿಸುವುದು. "ಯಜ್ಞೋ ಭವತು ಶಿಲ್ಪಂ" ಎಂಬ ಸೂತ್ರವನ್ನು ಮೊದಲು ಮಾಡಿಕೊಂಡು "ವೈದಿಕಂಚಾಪಿಶಿಲ್ಪಂ" ಎಂಬಸೂತ್ರದ ಕೊನೆಯವರಿಗೂ ವ್ಯಾಖ್ಯಾನ ಮಾಡಿರುತ್ತದೆ. ಯಜ್ಞವೆಂಬುವುದೂ ಶಿಲ್ಪದಿಂದಲೇ ಉಂಟಾಗಿರುತ್ತದೆ. ಶಿಲ್ಪವೂಕೂಡ ಯಜ್ಞಸಾಧನವಾಗಿರುತ್ತದೆ. ಶಿಲ್ಪವು ಪುಣ್ಯಸಾಧನವಾಗಿರುತ್ತದೆ. ಶಿಲ್ಪದಿಂದಲೇ ಮೋಕ್ಷಜ್ಞಾನವೂ, ಶಾಸ್ತ್ರಜ್ಞಾನವೂ, ಕೂಡ ಉಂಟಾಗುವುದು. ಲೌಕಿಕವಾದ ವ್ಯವಹಾರವೂ, ಕರ್ಮಗಳೂ ಮತ್ತು ವೈದಿಕಕರ್ಮಗಳೂ ಕೂಡ ಶಿಲ್ಪದಿಂದಲೇ ಆಚರಿಸಲ್ಪಡುತ್ತವೆ.

**ಬ್ರಾಹ್ಮಣಾನಾಮೇವೇದಗ್ಂ ಶಿಲ್ಪಂ ಭವತು। ತತ್ತ್ವಂ ಭವತಿ ಶಿಲ್ಪಂ। ರಹಸ್ಯಂ ಭವತಿ ಶಿಲ್ಪಂ। ಜಗತ್ಸರ್ವಗ್ಂ ಶಿಲ್ಪಮೇವ ಭವತಿ। ತದೇವ ವಿಶ್ವವರ್ಧಕಂ ಭವತ್ವಿತ್ಯುಪನಿಷತ್ ॥**

---

**ಮೂಲ । ಬ್ರಾಹ್ಮಣೇತಿ । ಇತ್ಯುಪನಿಷತ್ ಇತ್ಯಂತಃ ಸ್ಪಷ್ಟಾರ್ಥಃ । ನಿರುಕ್ತಾರ್ಥಾ ಶಾನ್ತಿಃ ॥**

---

ಬ್ರಾಹ್ಮಣರೂ ಶಿಲ್ಪಶಾಸ್ತ್ರದ ಅಧ್ಯಯನದಲ್ಲಿ ಅಧಿಕಾರಿಗಳೆಂದು ಹಿಂದೆ ಹೇಳಿರುವುದರಿಂದ ಬ್ರಾಹ್ಮಣರಿಗೂ ಈ ವಿಧವಾದ ಶಿಲ್ಪಜ್ಞಾನವು ಉಂಟಾಗಲಿ. ತತ್ವಗಳೂ ರಹಸ್ಯಗಳೂ ಕೂಡ ಶಿಲ್ಪವಾಗಿರುತ್ತವೆ. ಜಗತ್ತೆಲ್ಲವೂ ಶಿಲ್ಪದಿಂದಲೇ ವ್ಯಾಪ್ತವಾಗಿರುವುವು. ಈ ಶಿಲ್ಪವು ಪ್ರಪಂಚವೆಲ್ಲವನ್ನೂ ಅಭಿವೃದ್ಧಿಗೊಳಿಸುತ್ತಿರಲಿ. ಎಂದು ಈ ಉಪನಿಷತ್ತು ಶಿಲ್ಪದ ಸರ್ವಾತ್ಮಕತ್ವ, ಸರ್ವವಿಷಯಬೋಧಕತ್ವವೇ ಮೊದಲಾದ ಅರ್ಥವನ್ನು ಪ್ರತಿಪಾದಿಸಿರುವುದು.

ಸಹನಾವವತು ಎಂಬ ಶಾನ್ತಿಮಂತ್ರದ ಅರ್ಥವು ಹಿಂದೆ ಹೇಳಲ್ಪಟ್ಟಿರುತ್ತದೆ. ಗುರುವು "ಸಹನಾವವತು। ಸಹನೌಭುನಕ್ತು। ಸಹವೀರ್ಯಂಕರವಾವಹೈ। ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ" ಎಂದು ತನಗೂ ತನ್ನ ಶಿಷ್ಯಸಮುದಾಯಕ್ಕೂ ಉಭಶಾಂತಿಯನ್ನು ರಕ್ಷಣೆಯನ್ನೂ, ತನ್ನ ಅಧ್ಯಯನ ಅಧ್ಯಾಪನೆಗಳ ವಿಷಯದಲ್ಲಿ ತಮ ತಮಗೆ

# ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

**॥ಇತಿ ಯಾಜುಷಾಥರ್ವಣ ಶಿಲ್ಪವಿದ್ಯಾರಹಸ್ಯೋಪನಿಷತ್ಸಮಾಪ್ತಾ॥**

---

ವಿದ್ವೇಷಾದಿಗಳು ಉಂಟಾಗದೆ ಇರಲು ವೀರ್ಯವತ್ತಾಗಿಯೂ ತೇಜಶ್ಶಾಲಿಯಾಗಿರುವಿಕೆಯೂ ಉಂಟಾಗುವಂತೆ ವೇದಪುರುಷನ ಅನುಗ್ರಹವನ್ನು ಈ ಮಂತ್ರಗಳಿಂದ ಪ್ರಾರ್ಥಿಸುವನು.

"ಶಾನ್ತಿ" ಎಂದು ಮೂರು ಆವರ್ತಿಯಾಗಿ ಹೇಳಿರುವುದು ಶಾನ್ತಿಯು ಅವಶ್ಯಕವಾಗಿ ಉಂಟಾಗಬೇಕು ಎಂದು ಅರ್ಥವನ್ನು ಬೋಧಿಸುವುದು.

ಶಿಲ್ಪ ಶಬ್ದದ ವ್ಯುತ್ಪತ್ತಿಪೂರ್ವಕವಾಗಿ ಶಿಲ್ಪಶಬ್ದಾರ್ಥವನ್ನು ನಿರ್ವಚನೆಮಾಡಿ, ಈ ವಿಷಯದಲ್ಲಿ ಉಂಟಾಗಬಹುದಾದ ಆಕ್ಷೇಪ ಸಮಾಧಾನಗಳನ್ನು ಹೇಳಿ ವಿವರಿಸಿ, ಶಿಲ್ಪವೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವೆಂದು ಶಿಲ್ಪದ ಸರ್ವಾರ್ಥಸಾಧಕತ್ವ, ಸರ್ವಜ್ಞಾನೋಪಯೋಗಿತ್ವವನ್ನು ಬೋಧಿಸಿರುವುದರಿಂದ ಈ ಸಂಗ್ರಹಸೂಕ್ತಿಯು ಈ ಪ್ರಕಾರವಾದ ಮಹಿಮೆಯುಳ್ಳ ವೇದಶಿಲ್ಪವನ್ನು ಪ್ರಕಟಿಸಿರುವ ಸಾಂಬಮೂರ್ತಿಯು ನಮ್ಮನ್ನು ರಕ್ಷಿಸಲಿ ಎಂದು ಆಶೀರ್ವಾದವನ್ನು ಎಲ್ಲರಿಗೂ ಕೋರುತ್ತಿರುವುದು.

ಅತಃ—

ಯೋ ಜೀವಾನ್ ಕರ್ಮವಶ್ಯಾನ್ ದೃಢತರತಮಸಾ ಮೋಹಿತಾನ್ ಪಾತುಕಾಮೋ ವಿಜ್ಞಾನಂ ದಿತ್ಸುರೇಭ್ಯೋ ಭವತತಿಜನಿತಾನೇಕಕರ್ಮಾನುರೂಪಂ । ಸಜ್ಞಾನಾ-ನಂದರೂಪೋಽಪ್ಯಗಣಿತಮಹಿಮಸ್ವಾತ್ಮಮಾಯಾಂ ಸ್ವ-ಶಕ್ತಿಂ ಸಂಗೃಹ್ಣನ್ ವೇದಶಿಲ್ಪಂ ಪ್ರಕಟಯತಿತರಾಂ ಸಾಂಬ-ಮೂರ್ತಿಃ ಸ ನೋಽವ್ಯಾತ್ ॥

ಇತಿ ಸಂಗ್ರಹಸೂಕ್ತಿಃ ಸರ್ವಾತ್ಮನಾ ಅತಿಸುಂದರೀತಿ ಸಿದ್ಧಂ ॥

॥ ಇತಿ ಕೌಮಾರಂ ಭಾಷ್ಯಂ ಸಮಾಪ್ತಂ ॥

॥ ಓಂ ತತ್ಸತ್ ॥

---

ಯೋ ಜೀವಾನ್ ಕರ್ಮವಶ್ಯಾನ್ ದೃಢತರತಮಸಾ ಮೋಹಿತಾನ್ ಪಾತುಕಾಮಃ । ವಿಜ್ಞಾನಂ ದಿತ್ಸುರೇಭ್ಯೋ ಭವತತಿಜನಿತಾನೇಕಕರ್ಮಾನುರೂಪಂ ॥ ಸದ್ಜ್ಞಾನಾನಂದ ರೂಪೋಽಪ್ಯಗಣಿತಮಹಿಮಸ್ವಾತ್ಮಮಾಯಾಂ ಸ್ವಶಕ್ತಿಂ । ಸಂಗೃಹ್ಣನ್ ವೇದಶಿಲ್ಪಂ ಪ್ರಕಟಯತಿತರಾಂ ಸಾಂಬ ಮೂರ್ತಿಃ ಸ ನೋಽವ್ಯಾತ್ ॥

ಈ ಸಂಗ್ರಹಸೂಕ್ತಿಯು ಈಗ್ರಂಥಾರಂಭವಲ್ಲಿ ಹೇಳಿರುವ ಪ್ರಕಾರ ಅರ್ಥವನ್ನು ಬೋಧಿಸುವುದು. ಆದ್ದರಿಂದಲೇ ಇದು ಈ ಶಾಸ್ತ್ರದ ಅಭಿಪ್ರಾಯವನ್ನು ಸಂಗ್ರಹವಾಗಿ ಬೋಧಿಸಿರುವ ಕಾರಣ ಇದು ಸರ್ವ ಪ್ರಕಾರದಿಂದಲೂ ಅತಿ ಮನೋಹರವಾಗಿರುವುದು ಎಂದು ಈ ಭಾಷ್ಯದಲ್ಲಿ ಹೇಳಿರುತ್ತದೆ.

ಕೌಮಾರಭಾಷ್ಯವು ಸಂಪೂರ್ಣವು

॥ ಓಂ ತತ್ಸತ್ ॥

---

ಶ್ರೀ ಪರಿಮಳ ಪವರ್ ಪ್ರೆಸ್, ಮೈಸೂರು.